# ನಿರ್ಮಲಾ

(ಸಾಮಾಜಿಕ ನಾಟಕ)






1958

ನಾಟಕ ಕರ್ತ:

ಡಿ. ದುರ್ಗಾದಾಸ

ಪ್ರಕಾಶಕರು:

ಮಲ್ಲಪ್ಪ ವಿರೂಪಾಕ್ಷಪ್ಪ ಅರಳಿ,

ಪುಸ್ತಕ ವ್ಯಾಪಾರಿಗಳು, ಗದಗ.

೧೯೫೮]  [ಬೆಲೆ: ೧—೮—೦

# ನಿವೇದನೆ

ಪರಮ ಪವಿತ್ರಳಾದ ಕರ್ನಾಟಕ ಮಾತೆಯ ನಲ್ಮೆಯ ನಾಟ್ಯರಂಗದಲ್ಲಿ ಕನ್ನಡ ಕಲಾವಿದರು ಆಡಿ ನೋಡಿ ನಲಿಯಲೆಂದು ಬರೆದ "ನಿರ್ಮಲಾ" ಎಂಬ ನೂತನ ಸಾಮಾಜಿಕ ನಾಟಕವು ನಾಟ್ಯ ಜೀವಿಯಾದ ನನ್ನ ದ್ವಿತೀಯ ಕೃತಿಯಾಗಿದೆ. ಈ ನವನೂತನ ನಾಟಕವನ್ನು ಕಲಾರಂಗದಲ್ಲಿ ತಕ್ಕ ಪಾತ್ರ ಸಾಧನ ಸಲಕರಣೆಗಳಿಂದ ಅಭಿನಯಿಸಿ ಶಾರದಾ ನಾಟ್ಯ ಮಂಡಳಿ ಗೋಕಾಕ ಇವರು ಕನ್ನಡ ಕಲಾಭಿಮಾನಿಗಳನ್ನು ಸಂತೋಷ ಪಡಿಸಿದ್ದಕ್ಕಾಗಿ ನಾನು ಅವರಿಗೆ ಉಪಕೃತನಾಗಿದ್ದೇನೆ.

ನಾಟಕರಸಾಸ್ವಾದನ ಮಾಡುವಲ್ಲಿ ಹೊಸದು ಹಳೆಯದೆಂಬ ಭೇದವನ್ನೆಣಿಸದೆ ಗುಣಗ್ರಾಹಿಗಳಾದ ಕಲಾಭಿಜ್ಞರು, ನಾಟಕದ ಹೆಣಿಕೆ ಎಣಿಕೆಗಳನ್ನು ಲಕ್ಷಿಸಿ ಮೆಚ್ಚಿ ಮೋದಿಸುವರೆಂಬ ಉತ್ಸಾಹದಿಂದ ಈ ನಾಟಕ ಬರೆದಿದ್ದೇನೆ. ಈ ನನ್ನ ನಾಟಕವನ್ನು ಮುದ್ರಿಸಿ ಪ್ರಕಾಶ ಪಡಿಸಿದ ಶ್ರೀ ಮಲ್ಲಪ್ಪಾ ವಿರೂಪಾಕ್ಷಪ್ಪಾ ಅರಳಿ ಪುಸ್ತಕ ವ್ಯಾಪಾರಿಗಳು ಗದಗ ಅವರಿಗೂ ನಾಟಕ ಶುದ್ಧಿಗೆ ನೆರವಿತ್ತ ಶ್ರೀ ಕರ್ನಾಟಕ ಕವಿಚಂದ್ರ ಪಂ. ಶ್ರೀಕಂಠಶಾಸ್ತ್ರಿ ನಲವಡಿ ಅವರಿಗೂ, ಈ ನಾಟಕವನ್ನು ಅಂದವಾಗಿ ಮುದ್ರಿಸಿದ ಹ. ಸ. ನಂದಿಗೌಡ್ರ ಅವರಿಗೂ ನಾನು ಕೃತಜ್ಞನಾಗಿದ್ದೇನೆ.

ಕಲೆಯ ನಿಜವಾದ ನಿರೀಕ್ಷಣೆಯೇ ನಾಟಕದ ನೋಟವಾಗಿದೆ ಎಂಬದನ್ನು ಯಾರೂ ಮರೆಯ ಕೂಡದು.

"ಕಲಾಕಿನ್ನರ"

ಡಿ. ದುರ್ಗಾದಾಸ

# ಮುನ್ನುಡಿ

ಯಾವದೇ ಕಲೆಯಲ್ಲಿ ಮನುಷ್ಯನು ಪರಿಪೂರ್ಣನಾಗಬೇಕಾದರೆ. ಅವನು ಆ ಕಲೆಯಲ್ಲಿ ಹನ್ನೆರಡು ವರ್ಷ ಸತತ ಅಭ್ಯಾಸಿಯಾಗಿದ್ದರೆ ಅವನಿಗೆ ಆ ಕಲೆಯು ಮನದಟ್ಟಾಗಿ ಅವನು ಕಲಾವೃಕ್ಷವಾಗಿ ಬೆಳೆದು ಜಗತ್ತಿಗೆ ಕಲಾಫಲಗಳನ್ನು ನೀಡಿ ಎಲ್ಲರನ್ನೂ ಆನಂದ ಪಡಿಸುತ್ತಾನೆ.

ಹನ್ನೆರಡುವರ್ಷದ ಸತತಾಭ್ಯಾಸವಾದರೆ ಅದಕ್ಕೆ ಒಂದು ಪಟ್ಟವೆನ್ನುತ್ತಾರೆ. ವಿದ್ಯೆ, ಕಲೆ, ಕೈಗಾರಿಕೆ, ಯಂತ್ರ, ಕೃಷಿ, ಸಾಹಿತ್ಯ, ಶಾಸ್ತ್ರ, ಮೊದಲಾದ ಸಕಲವಿದ್ಯೆಗಳಲ್ಲಿಯೂ ಮನುಷ್ಯನು ಒಂದು ಪಟ್ಟ ಕಳೆದರೆ. ಅವನು ಒಂದು ಮಟ್ಟಕ್ಕೆ ಅಂದರೆ ಆ ಕಲೆಯ ಪೂರ್ಣತೆಗೆ ಮುಟ್ಟುತ್ತಾನೆ.

ಅಕ್ಷರಾಭ್ಯಾಸ ಮಾಡದಿದ್ದವರೂ ಅಭ್ಯಾಸಬಲದಿಂದ ವೇದಾಂತವನ್ನು ಸಶಾಸ್ತ್ರವಾಗಿ ಹೇಳುತ್ತಾರೆ. ಬುದ್ಧಿಜೀವಿಯಾದ ಮನುಷ್ಯನಲ್ಲಿ "ಓದು ಒಕ್ಕಾಲು ಬುದ್ಧಿ ಮುಕ್ಕಾಲು" ಎಂಬ ಗಾದಿಯಂತೆ ದೇವದತ್ತವಾದ ಬುದ್ಧಿಬಲದಿಂದ ಅಸಾಧ್ಯವನ್ನು ಸಾಧಿಸಿದ್ದಾರೆ.

ಇದರಂತೆ "ಕಲಾಕಿನ್ನರ" ಡಿ. ದುರ್ಗಾದಾಸ ಇವರು ೨೫ ವರ್ಷ ಸತತವಾಗಿ ಕಲಾಸೇವೆಯ ಉಪಾಸನೆ ಮಾಡಿ ಅನೇಕ ನೂತನ ನಾಟಕ ಬರೆದು ಉತ್ತಮ ನಾಟಕಕಾರರಾಗಿರುವದು ಕಲಾದೇವಿಯ ಕೃಪೆಯಾಗಿದೆ. ಇವರು ಬರೆದ "ವೀರ ಧನಂಜಯ" ಅರ್ಥಾತ್ ಪಾಶುಪತಾಸ್ತ್ರ ನಾಟಕವು ಮುದ್ರಣವಾದ ಮರುಕ್ಷಣವೇ ನೀತಿನಿರ್ಮಲವಾದ "ನಿರ್ಮಲಾ" ಎಂಬ ಸಾಮಾಜಿಕ ನಾಟಕವು ಮುದ್ರಿತವಾಗಿ ಹೊರಗೆ ಬಂದಿರುವದು. ನಾಟಕವು ಸುಂದರ ಭಾಷೆಯಿಂದಲೂ ಸುಮನೋಹರ ಭಾವಗರ್ಭದಿಂದಲೂ ಕನ್ನಡ ಕಲಾರಂಗವನ್ನು ಬೆಳಗಿ ಕಲಾಭಿಮಾನಿಗಳನ್ನು ಸಂತೋಷ ಪಡಿಸಲೆಂದು ಹಾರೈಸುವೆ.

ಈ ನಾಟಕವು ನೀತಿ ನಿರ್ಮಲರಾದ ಹಾಗೂ ಪತಿವೃತೆಯರಾದ ಸ್ತ್ರೀಯರ ಪವಿತ್ರ ಮನೋಭಾವವನ್ನೂ ಪತಿ ಎಂಬ ಶಬ್ದವನ್ನು ಅಪವಿತ್ರಗೊಳಿಸುವ ಜಾರ ಸ್ತ್ರೀಯರ ಅನೀತಿಯ ನಡೆಯನ್ನೂ, ನಾಟಕದಲ್ಲಿ ಚಿತ್ರಿಸಿ ಜಗತ್ತಿಗೆ ನೀತಿ ಕಲಿಸುವದೇ ನಾಟಕಕಾರರ ಧ್ಯೇಯವಾಗಿದೆ.

ಈ ನಾಟಕದಲ್ಲಿ ಅತ್ತೆ ಅಳಿಯ ಹೆಂಡತಿ ಇವರ ಸನ್ನಿವೇಶಗಳು ಹಾಸ್ಯರಸಪೂರ್ಣವಾಗಿ ಹರಿಯುತ್ತಿವೆ. ಒಟ್ಟಾರೆ "ನಿರ್ಮಲಾ" ನಾಟಕವು ಕಲಾನಿರ್ಮಲವಾಗಿದೆ. ಅಭಿನವವಾಗಿದೆ ಎಂದು ನನ್ನ ಅಭಿಪ್ರಾಯ.

"ನಾಟ್ಯಕವಿ ಕೇಸರಿ"
ಹನಮಂತರಾವ ಕಂದಕಲ್ಲ.

# ಪಾತ್ರ ಪರಿಚಯ



## ಪುರುಷಪಾತ್ರ

೧. ನರೇಂದ್ರ

೨. ಕಲ್ಲಪ್ಪ

೩. ಪ್ರೇಮನಾಥ

೪. ಅಶೋಕ

೫. ಶ್ರೀಕಾಂತ

೬. ಚಿಂತಾಮಣಿ

೭. ಅಮರಕಾಂತ

## ಸ್ತ್ರೀಪಾತ್ರ

೧. ನಿರ್ಮಲಾ

೨. ರೇಣುಕಾ

೩. ಕುಸುಮ

೪. ಯಮನವ್ವಾ

೫. ಕನಕಿ

ಜಜ್, ಪ್ರಾಸಿಕ್ಯೂಟರ,
ಮೊದಲಾದವರು

॥ ಶ್ರೀ ॥

# ನಿರ್ಮಲಾ

( ಸಾಮಾಜಿಕ ನಾಟಕ )



## ಪ್ರಥಮಾಂಕ

**ನಾಂದಿ :** ರಾಗ: ಭೂಪ, ತಾಳ: ಝುಂಪಾ

ನಟವರನೆ ನಟರಾಜ ನಟವಂದ್ಯನಾದ ಬ್ರಹ್ಮ ॥
ನವಭಾವ । ಕಲಾಸೇವಾ ॥ ಪ ॥
ಝುನ ಝುನ್ ಝುನತ ಝುನಕ ।
ನಾದ ತಾಲವರ ಹರ ॥ ಅ. ಪ. ॥
ನಾಟ್ಯಸೇವ ಶವ ಪ್ರಿಯ ।
ಕಾವ್ಯಸೇವ ತಣಿಸು ಧ್ಯೇಯ ಝುಂ ಝುಂ ॥ ೧ ॥

### ಪ್ರವೇಸ ೧.



(ಮಧ್ಯಮ ತರಗತಿಯ ಮನೆ. ಗಾಂಧಿ, ನೆಹರು, ಪಟೇಲ ಮುಂತಾದ ರಾಷ್ಟ್ರವೀರರ ಭಾವಚಿತ್ರಗಳು. ನಿರ್ಮಲಾ ಅಂಬಿಕೆಯ ಮೂರ್ತಿಗೆ ಆರುತಿ ಬೆಳಗಿ ಗೀತೆ ಹಾಡುವಳು, ಗೀತೆಯು ಮುಗಿಯುವದರೊಳಗಾಗಿ ಸುರೇಂದ್ರ ಬರುವನು. )

**ನರೇಂದ್ರ—** ನಿರ್ಮಲಾ,

**ನಿರ್ಮಲಾ—** ನರೇಂದ್ರಾ, (ನೋಡಿ ನಾಚಿ ಶಿರಗೆಳೆದುಕೊಂಡು)

**ನರೇಂದ್ರ—** ಕೋಗಿಲೆಯ ಕಂಠದಿಂದ ಸೂಸಿಬರುವ ಸಂಗೀತ ಸುಧಾರಸವ ಉಣಿಸಿದೆ ಮನಕೆ. ನೈಜಕಲೆಯು ಮಾನವನ ಅಂತರಂಗ ವನ್ನು ಸೂರೆಗೊಂಡು ಸರ್ವವನು ಮರೆಯಿಸಿ, ಆನಂದದಲಿ ತೇಲಿಸುವದು.

**ನಿರ್ಮಲಾ—** ಕಲೆಯೇ ಜೀವಿಗಳ ಸವಿಬಾಳು. ನರೇಂದ್ರ, ಮಿತಿ ಮೀರಿದ ವರ್ಣನೆಯಿಂದ ನನ್ನಿಂದ ನೀನು ಪಡೆಯಬೇಕಾದುದೇನು ?

**ನರೇಂದ್ರ—** ನಿನ್ನಿಂದ ಪಡೆಯಬೇಕಾದುದನು, ನಿಸರ್ಗದ ಒಲುವಿ ನಲಿ ಅಮರಪ್ರೇಮದಲಿ ನಿನ್ನಾತ್ಮವನೆ ನನಗೆ ನೀಡಿರುವೆ ! ಆತ್ಮವೇದಿಕೆಯ ಮೇಲೆ ಪ್ರೇಮ ಮೂರ್ತಿಯು ರೂಪಗೊಂಡಿರುವದೆಂದ ಮೇಲೆ, ಬೇಡಿಕೆಯ ಭಾವವೆಲ್ಲಿದೆ ?

**ನಿರ್ಮಲಾ—** ತನ್ನವನಿಗಾಗಿ ಸ್ತ್ರೀಯ ಮನವು ನಂಬುಗೆಯ ನೀಡಿ ದಂತೆ, ತನ್ನವಳಿಗಾಗಿ ಪುರುಷನ ಮನವು ಹಂಬಲಿಸುವದು ವಿರಳವಲ್ಲವೇ ?

**ನರೇಂದ್ರ—** ಈ ಕೊಂಕು ಶಬ್ದಗಳ ಮತಿತಾರ್ಥವೇನು ?

**ನಿರ್ಮಲಾ—** ಹಾ, ಹಾ, ಅಚ್ಚರಿಯಿಂದ ಬೆಚ್ಚಿ ಬೀಳಬೇಡಿ ! ಬೇರೆ ಬೇರೆ ರೂಪರಾಶಿಯಲಿ ಬೆರೆತು, ಕ್ಷಣವಾದರೂ ಮನಸೋತು, ತನ್ನವ ಳಿಗೆ ವಂಚನೆ ಮಾಡುವ ಅಕಾಲಿಕ ಪ್ರಸಂಗಗಳ ಪರಿಪಾಠವು ಪುರುಷ ಜೀವಿ ಗಳಿಗೆ ವಿಶೇಷ.

**ನರೇಂದ್ರ—** ಆತ್ಮವಂಚನೆಯ ಅಧಮರಿಗೆ ಈ ಉಪಮೆ ಸಲ್ಲುವದ ಲ್ಲದೆ, ನಿರ್ಮಲ ಪ್ರೇಮದ ತಿರುಳು ತಿಳಿದಿರುವ ಆತ್ಮಿಗಳಿಗಲ್ಲಾ.

**ನಿರ್ಮಲಾ—** ಕೋಪವೇಕೆ ? ನಿಮಗಾಗಿ ನಾನೀ ಶಬ್ದಗಳ ನುಡಿಸಿ ದವಳಲ್ಲಾ. ಹಾಗೆ ನಿಮ್ಮ ಭಾವನೆಯಾಗಿದ್ದರೆ ಕ್ಷಮೆ ಬೇಡುವೆ.

**ನರೇಂದ್ರ—** ಅಪರಾಧವಿಲ್ಲದಿರಲು ಕ್ಷಮೆ ಬೇಡುವದೇಕೆ ! ನೀನು ನನ್ನ ಜೀವನದ ಬೆಳಕು. ಸತ್ಯಶೀಲ ನಿರ್ಮಲ ಜ್ಞಾನದೇವತಾ ಈ ನಿರ್ಮಲಾ

**ಡೈಲಾಗ ಪದ** ರಾಗ : ಮಿಶ್ರಪಹಡಿ ತಾಳ : ಕೇರವಾ

**ನರೇಂದ್ರ—** ಬಾಯುವತಿ ಜೀವನಗೆಳತಿ । ನೀತಿನಿರ್ಮಲಾ ಗುಣಭಾರತಿ ।

**ನಿರ್ಮಲಾ—** ಈಸುಮತಿ ನೀಡುವ ಸದ್ಗತಿ । ನಿ ಸಂಸಾರರಥ ಸಾರಥಿ ।

ನರೇಂದ್ರ— ಈ ಸಂಯೋಗ ಸುಖವೇ ಜೀವಿತಾ।

ನಿರ್ಮಲಾ—ಈ ಆನಂದ ಮಿಲನವೇ ಜೀವಿತಾ।

ನರೇಂದ್ರ— ನಿರುತದಿ ಸರಸದಿ ಬಾಳುವಾ।

ನಿರ್ಮಲಾ—ತವಪದ ಗತಿಆದೆ ಹೊಂದುವಾ।

ನರೇಂದ್ರ— ಬಾ, ಗೆಳತಿ ಬಾ, ಬಾ।

ನಿರ್ಮಲಾ—ಬಾ, ಪ್ರಿಯತಮಾ ಬಾ, ಬಾ।

ಇಬ್ಬರೂ— ಕೂಡಿ ನಡೆ ಬಾಳುವ ಬಾಳಿನಲಿ।

ನಿರ್ಮಲಾ— ಈ ಬಾಲೆಯಲಿ ನೀನಿರಿಸಿದ ಪ್ರೇಮಕ್ಕೆ ನಾನು ರುಣಿ.

ನರೇಂದ್ರ— ಅವಿವಾಹಿತ ತರುಣಿ, ಮನಮೆಚ್ಚಿದ ಮಾನಿನಿಯಲ್ಲಿ ಹುಡುಕಲಾರದು ಮನವು ಅಸ್ಥಿರದ ಸಂಪದವನ್ನು. ನಿರ್ಮಲೆ, ಪ್ರೇಮಕ್ಕಿಂತ ಮಿಗಿಲಾದ ವಸ್ತು ಮತ್ತೊಂದಿಲ್ಲಾ ಜಗದೊಳಗೆ. ಮಾನವನ ಜೀವನಕ್ಕೆ ನಾನಾದರೂ ಶ್ರೀಮಂತನೇ, ನಿನ್ನಂತೇ ಬಡಜೀವಿ. ಶ್ರಮವಹಿಸಿ ಶಾರದೆಯು ಆರಾಧನೆ ಗೈದು ಸಂಪಾದಿಸಿದ ವಿದ್ಯೆಯಿಂದ ದುಡಿದು, ಜೀವನದ ಮೇಲ್ಮೆಯನ್ನು ಸಾಧಿಸ ಬೇಕಲ್ಲದೇ ಬೇರೇನು.

ನಿರ್ಮಲಾ— ಬರಲಿರುವ ನಿನ್ನ ಭಾಗ್ಯಭೋಗ್ಯಗಳ ಸವಿ ವಿಲಾಸಗಳಲ್ಲಿ ಮಮತೆಯಿಂದಲಿ ಮನಸಿಜಳನು ಮರೆಯದಿರು, ನರೇಂದ್ರ.

ನರೇಂದ್ರ— ನಿಮ್ಮ ತಂದೆಯವರು ಊರಿಗೆ ಹೋಗಿ ಎಷ್ಟು ತಿಂಗಳಾಯಿತು.

ನಿರ್ಮಲಾ—ಮೂರು ತಿಂಗಳು ಮೀರಿದವು ಮೊನ್ನೆ ಪತ್ರಬಂದಿದೆ.

ನರೇಂದ್ರ— ಏನೆಂದು ಬರೆದಿರುವರು, ಮಗಳ ನೆನಪೇ ಅವರಿಗೆ ಮರವಾಯಿತೇ. ಕಣ್ಣೀರೇಕೆ ಹೇಳು ನಿರ್ಮಲಾ, (ಅತ್ತಿತ್ತ ನೋಡಿ ಹೇಳುವಳು. ಯಮುನವ್ವಾ ಕೇಳುವಳು)

ನಿರ್ಮಲಾ— ನಮ್ಮೀಪ್ರೇಮ ಸಮ್ಮಿಲನದಲಿ ಅಂಕುರಿಸಿ ಬೆಳೆದ ಈ ವಿಷಯವು ನನ್ನ ತಂದೆಗೆ ತಿಳಿದರೆ, ನಾನೇನೆಂದು ಉತ್ತರಿಸಲಿ!

**ನರೇಂದ್ರ**— ಇದಕಾಗಿ ದುಃಖಿಸಬೇಕೆ? ವಂಶದೀಪವನೆ ಬೆಳಗಿಸಲು ಜನಿಹೊಂದಿಬರುವ ಕಂದಮ್ಮನಿಗಾಗಿ ನೀನೇಕೆ ಚಿಂತಿಸುವೆ? ನೀನು ನನ್ನ ಧರ್ಮದೇವತೆಯೆಂದು ವಚನ ನೀಡಿ ಪರಿಗ್ರಹಿಸಿರುವೆನೆಂದ ಮೇಲೆ ಭಯಪಡುವದೇಕೆ?

**ನಿರ್ಮಲಾ**— ಕೊನೆಗಾಣುವದಾಗಲಿ, ಉದಯವಾಗುವದಾಗಲಿ, ನಿನ್ನೊಲವನೇ ಅವಲಂಬಿಸಿದೆನ್ನ ಬಾಳು!

**ನರೇಂದ್ರ**— ಪದೇ ಪದೇ ಅದೇ ಉತ್ತರ ಪಡೆಯುವದು, ಹೆಣ್ಬುದ್ಧಿಯ ಸ್ವಭಾವ! ನಿನ್ನ ಬಾಳನ್ನು ಮಸಣಗೂಡಿಸುವದಾದರೆ, ನಾನೀನಂಬುಗೆಯ ನೀಡುತ್ತಿದ್ದೆನೆ? ಖಂಡಿತವಾಗಿ ನಾನು ನಿನ್ನನ್ನು ಲಗ್ನವಾಗುವೆ. ನಡೆ ಊಟ ಮಾಡುವ ವೇಳೆಯಾಗಿದೆ.

**ನಿರ್ಮಲಾ**— ಹಸಿವೆ, ನಿದ್ರೆ-ನೀರಡಿಕೆಗಳನೇ ಮರೆಸಿದೆ ಈ ಭಾರವಾದ ಮನದ ಬೇಸರಿಕೆ! ಪ್ರಚಂಡ ಬಿರುಗಾಳಿಯೊಳು ಸಿಲುಕಿರುವೆ, ನನ್ನ ಸುಖಸೊಬಗಿನ ಜೀವನವು ಮಸಣಗೂಡುತಿದೆ ನರೇಂದ್ರಾ.

**ನರೇಂದ್ರ**— ನಿರ್ಮಲಾ, ಏನಿದು ಭ್ರಾಂತಿಯೇ! ಬಾ, ನಾನು ನಿನ್ನೊಡನೆ ಭೋಜನ ಮಾಡುವೆ. (ಹೋಗುವರು.)

**ಯಮುನವ್ವ**—ಎವ್ವಾ, ಏನ ಧೈರ್ಯನ ಈ ಹೆಂಗಸೂದ್ರ್ಹ. ಒಳಗಿಂದೊಳಗ ಹೊಟ್ಟಿ ಬೆಳಿಸಿಕೊಂಡಳಲ್ಲಾ ನಿರ್ಮಲವ್ವಾ. ಏನಿದ್ರೂ ಹೆಂಗಸೂರ್ನ ನಂಬಬಾರ್ದು ಅಂತಾರ ಇದಕ್ಕ! ಹಗಲೆಲ್ಲ ದೇವರ ದ್ಯಾನ ಮಾಡಿಕೊಂತಾ ಒಬ್ಬರ ಉಸಾಬರಿಗೆ ಹೋಗದಂತಾ ಮನಶ್ಯಾಗ ಆ ಮುದಿತಂದಿಗೆ ಮಂದ್ಯಾಗ ಮಾರೀ ವ್ಯಾಕ ಎತ್ತದಂಗ ಮಾಡಿದ್ಲು. ನಾಳೆ ಅಪ್ಪಾರು, ಊರಿಂದ ಬಂದ್ರು ಏನ್ನೈತೇನ ಇಬ್ಬುದ್ರ್ಹ. ಅಪ್ಪಾರು ಊರ್ಲಿಂದಾ ಬರೋತನಕಾ ಮಗಳನ್ನು ನೋಡಿಕೊಂಡಿರು ಅಂತಾ ಹೇಳಿ ಹೋಗಿದ್ರು. ಇದೇನಾತ ಎವ್ವಾ!

**ಕಲ್ಲಪ್ಪ**— ಯಾಕ ಯತ್ತೀ, ಮಾರಿ ಸಣ್ಣದಾಗೇತಿ.

**ಯಮುನವ್ವ**— ಏನ ಮಾಡೋದು, ಅದನ್ನ ಹೇಳಾಕ ಬರಂಗಿಲ್ಲಾ.

**ಕಲ್ಲಪ್ಪ**— ಅಬಾಬಾ ಆಟ ತಿಳ್ಯಾಕಿಲ್ಲ ನನಿಗೆ ಅದ ನನ್ನಮುದವಿ ಇಚಾರಾ.

**ಯಮುನವ್ವ**— ಅಹಾಹಾ, ಆದ ಹುಡಿಗಿ ಸಣ್ಣದೈತೇ, ಈಗ ಆರು ತುಂಬಿ ಯೆಳರಾಗ ಬಿದ್ದೈತಿ ಹುಡಿಗ್ಗೆ ದೊಡ್ಡದರ ಆಗಲೀ.

**ಕಲ್ಲಪ್ಪ**— ಯೆಟಲೆಕ್ಕ ಹಾಕಿದ್ರು ಆಟ, ಹಿಂಗ ಯಡ್ಡ ಉಗಾದಿ ದಾಟಿದ್ರ ವಂಭತ್ರಾಗ ಬೀಳತ್ತೈತಿ ಆಮ್ಯಾಲೇನು ಮದಿವ್ಯಾಗ ಸುರಗಿ ನೀರು ಬಿದ್ರ ಬುರುಬುರು ಉಬ್ಬಿ ಹುಡಿಗಿ ಕೈಗೆ ಬರತ್ತೈತಿ ಈಟ್ಯಾಗ ಚಿಂತಿ.

**ಯಮುನವ್ವ**—ಹಂಗಮಾಡ್ತಿನಿ ಮಲಗಹೊಗು ಹೊತ್ತು ಬಾಳಾಗೈತಿ

**ಕಲ್ಲಪ್ಪ**— ಹೌದಯತ್ತಿ ಮ ನ ಸು ಚಟಪಟಸಾಕ ಹತ್ತೇತಿ. (ಹೋಗುವರು) ಬರುವರು ನರೇಂದ್ರ ನಿರ್ಮಲಾ ಮಲಗುವಷ್ಟರಲ್ಲಿ ಕಲ್ಲಪ್ಪ ಆಕಳಿಸುತ್ತ ಬರುವನು)

**ನರೇಂದ್ರ**— ನಿರ್ಮಲಾ, ಕಲ್ಪನೆಯಿಂದ ಏಕಿನಿತು ಭೀಷಣ ಚಿತ್ರ ಗಳನ್ನು ನೆನೆ ನೆನೆದು ಮನವ ನಡುಗಿಸಿಕೊಳ್ಳುತಿರುವಿ ಮಲಗಿಕೋ. (ಮಲಗುವಳು) ಏಕೆ ಕಲ್ಲಪ್ಪಾ ಇನ್ನು ಮಲಗಲಿಲ್ಲ.

**ಕಲ್ಲಪ್ಪ**— ಮಲಗಬೇಕಂತಾ ಮಾಡಿದ್ದೇ ಹಾಸಗೀನು ಹಾಸಿದ್ದೇ ಹಂಗಬಂದೇ ನೀವು ಇನ್ನು ಮಲಗಿಲ್ಲಾ ನೋಡಿ ಹೋಗೂನೂ ಅಂತಾಬಂದೆ ( ನೋಡಿ ) ಅವ್ವರು ಯಾಕ ಮಾರಿಸಣ್ಣದ ಮಾಡ್ಯಾರಾ ಬಾಳ ತರಾಸ ಆದ್ಹಂಗ ಕಾಣಸತ್ತೈತಿ ಉರಿಗೆಹೊದ ತಂದಿಯಸಣಾ.

**ನರೇಂದ್ರ**— ಚಿಕ್ಕಂದಿನಿಂದಲೂ ಇವರ ಸ್ವಭಾವವೇ ಹಾಗೆ. ನಡೆ ಮಲಗು.

**ಕಲ್ಲಪ್ಪ**— ನೀವು ಅವ್ರು ಚಿಕ್ಕಂದಿಲೇ ಕೂಡಿ ಆಡಿ ಬೆಳದವ್ರು ನಿಮುಗ ಗೊತ್ತು. ನೀವು ಮಕ್ಕೊಳ್ರಿ ಬಾಗಲಾ ಬಂದೋಬಸ್ತು ಹಾಕ್ರಿ ಮತ್ತ ಆಗಳಿ ಹಾಕಾಕ ಮರ್ತೀರಿ. ( ಹೋಗುವನು. ನರೇದ್ರ ಕೂತು ಅತ್ತಿತ್ತ ಓಡಾಡಿ ವಿಚಾರ ಮಗ್ನನಾಗಿ )

**ನರೇಂದ್ರ**— ಆವ ವಿಚಾರದ ಕೊನೆಯ ಮುಟ್ಟಲಿಲ್ಲಾ ಮನವು ಸ್ಥಿರವಿಲ್ಲದಾಗಿದೆ. ನಿರ್ಮಲೆಯು ನನ್ನ ಸಂಬಂಧವು ಇವಳ ತಂದೆಗೆ ತಿಳಿದರೇ, ಇವಳ ವಂಶವೃಕ್ಷಕ್ಕೆ ಕೊಡಲೆಯ ಪೆಟ್ಟನಿಟ್ಟು. ಸಮಾಜದಲ್ಲಿ ವಂಚಕನಾಗಿ ಹೀನ ಬಾಳಿನಲಿ ಕಾಲಕಳೆಯ ಬೇಕು. ಕರೆದು ಕೊಂಬುವದಿಲ್ಲ. ಬೆಳಸಿ

ಕೊಂಬುವರಿಲ್ಲಾ, ಕಕ್ಕುಲತೆಯಿಂದ ಅನ್ನವಿಕ್ಕುವರಿಲ್ಲಾ, ಹೀಗಾದರೇ ಮುಂದೇನು ಜೀವಿತಾ ಪುಣ್ಯದಂಶವನು ಕಾಣದ ಈ ಸ್ವಾರ್ಥಿ ಜಗದಲಿ, ಮಾನವರೇಕೆ ಬ್ರಹ್ಮಸೃಷ್ಟಿಯಲಿ ಜನಿ ಹೊಂದಿದಾ ಕ್ರೂರ ಜಲಚರ ಜೀವ ಜಂತುಗಳು ಒಂದು ಪ್ರಾಣಿಯನ್ನು ಕೊಂದು ಆದರನ್ನದಿಂದ ಜೀವಿಸುತ್ತಿರಲು ಬುದ್ಧಿಯುಳ್ಳ ಮಾನವನಿಗೆ ಜೀವಿತವು ಕಠಿಣವೇ ಇದೇ ನಿರ್ದಾರಾ. ನರೇಂದ್ರನ ಭಾಗ್ಯ ಚಕ್ರ ಸುಖಸೌಖ್ಯದ ಶಿಖರವನ್ನು ಮುಟ್ಟಲಿ. ಆನಂದ ಪಡೆಯಲಿ. (ಆನಂದದಿಂದ ನಗುವನು. ನರೇಂದ್ರನ ತಂಡೆಯ ಭೂತ ಕಾಣಿಸಿಕೊಳ್ಳುವದು. ಪೈಶಾಡಿಕ ನಗುವಿನಲ್ಲಿ ಶಾಡೋದಲ್ಲಿ ಭೂತದ ನೆರಳು ಕಾಣುವದು. )

**ಭೂತ**— ನರೇಂದ್ರಾ, ಒಂದೇ ಆತ್ಮದ ಎರಡು ದೇಹಿಗಳಾಗಿ ಗೆಳೆತನದಿಂದ ಬಂಧುತ್ವ ಬೆಳೆಸು, ನಾನು ಕಣ್ಮರೆಯಾದರೂ ಹೊಟ್ಟೆಯ ಮಗನಿಗಿಂತಲೂ ಪ್ರೀತಿಯಿಂದ ಬೆಳಿಸಿ, ನಿನಗೆ ವಿದ್ಯಾಭ್ಯಾಸ ಮಾಡಿಸಿದ ನಿನ್ನ ತಂದೆಯ ಸ್ವರೂಪಿಯಾದ ನನ್ನ ಮಿತ್ರನಿಗೆ ಹಗೆಬಗೆದು ದ್ರೋಹಿಯಾದೆ. ನನ್ನ-ಅವನ ಮಿತ್ರತ್ವದ ಅಮರಪ್ರೇಮವನ್ನು ಮಣ್ಣುಗೂಡಿಸಿದೆ! ನೀತಿ-ಶೀಲಗಳಿಗೆ ತಿಲಾಂಜಲಿಯನು ನೀಡಿದೆ! ಮನುಷ್ಯತ್ವವನು ಮರೆತ ನಿನ್ನಂಥ ಪಾಪಿಗೆ ರವರವನರಕವೇ ಪ್ರಾಪ್ತಿ! ನಿನ್ನ ತಂದೆಯ ಒಡಲನು ಬೇಯಿಸಿ, ಪಿತೃದ್ರೋಹಿಯಾದಿ! ನನ್ನ ಮಿತ್ರನ ಮಗಳನ್ನು ಮೋಹಿಸಿ, ಗರ್ಭವತಿಯಾದ ಅವಳ ಜೀವನವನ್ನೇ ನಾಶ ಮಾಡಿದಿ! ನಿನಗಿನ್ನು ಈ ಮನೆಯಲ್ಲಿ ಸ್ಥಳವಿಲ್ಲ; ಹೊರಬೀಳು. ಪವಿತ್ರ ದೇವಮಾನವರ ಸ್ಥಾನದಲ್ಲಿ ನಿನ್ನಂಥ ಪಾಪಿ-ಪಿಶಾಚಿಗಳ ಸಂಚಾರಬೇಡ. ಕ್ರೂರಕರ್ಮಿ, ಚಾಂಡಾಲಾ, ತೊಲಗು! ಕಣ್ಮರೆಯಾಗು! (ನಗುವಿನ ಘೋರಧ್ವನಿ, ಅತ್ತಿತ್ತ ನೋಡಿ ಹೋಗುವನು. ಬಾಗಿಲ ಸಪ್ಪಳಕ್ಕೆ ನಿರ್ಮಲೆ ಎಚ್ಚರಾಗುವಳು. ನರೇಂದ್ರನನ್ನು ನೋಡಿ ಗಾಬರಿಯಾಗುವಳು. ದೇವಿಯ ಮುಂದಣ ದೀಪ ಶಾಂತವಾಗುವದು, ಚೀರಿ ಬೀಳುವಳು. ಕಲ್ಲಪ್ಪ, ಯಮುನವ್ವ ಬರುವರು.)

**ನಿರ್ಮಲಾ**— ನರೇಂದ್ರಾ, ಜಗನ್ಮಾತಾ, (ಬೀಳುವಳು)

**ಯಮುನವ್ವ**— ಎವ್ವಾ, ಏನಾತಯವ್ವಾ.

**ಕಲ್ಲಪ್ಪ**—ಕಳ್ರೂ,ಕಳ್ರೂ. ಯತ್ತೀ, ಯತ್ತಿ. ಹಿಡಿಬಾ ಕೈಯಾಗ ಖತಿ

ಯಮುನವ್ವ— ಏನ.

ಕಲ್ಲಪ್ಪ— ಇಲ್ಲಿ ಐತಿ, (ಕಂಬಳಿಯಲ್ಲಿ ಸುತ್ತಿ ಹಿಡಿದ ಕಂಬಳಿ ತೆಗೆಯುವನು, ತಲೆದಿಂಬು ಬೀಳುವದು. ಚೀರಿ ನಡಗುತ್ತಾ ಅತ್ತಿಯನ್ನು ತೆಕ್ಕೆಯಲ್ಲಿ ಹಿಡಿಯುವನು.) ಐಯ್ಯಯಪ್ಪಾ, ಕುರಿ ತೆಲಿ.)

ಯಮುನವ್ವ—ಕುರಿತೆಲಿ ಅಲ್ಲಾ, ನಿನ್ನ ತೆಲಿ. ಮೂಳಾ, ತಲೆದಿಂಬಿಗಿ ಏಟ ಹಾರಿ ಬೀಳ್ತಿ.

ಕಲ್ಲಪ್ಪ— ಅಯ್ಯಯ್ಯವ್ವಾ ಏನಾತ ಯತ್ತೀ.

ಯಮುನವ್ವ— ಏನಾತ ಏನ, ನನಗೂ ತಿಳಿಲೇ ಇಲ್ಲಾ. ಚೀರಿದ ಕೂಗು ಕಿವಿಗೆ ಬಿತ್ತು. ಬಂದು ನೋಡೂದ್ರಾಗ, ಅವ್ವ ಬಿದ್ದಿದ್ಲು.

ಕಲ್ಲಪ್ಪ— ನಾ, ಕಳ್ರ ಬಂದ್ರಂತ ಕಪ್ಪರಿಸಿಕೊಂಡು ಎದ್ದು ಗ್ವಾಡಿ ಧಡಾನ ಹಾದು, ಮುಗ್ಗರಿಸಿ ಬಿದ್ದೆದ್ದು, ಬಡಗಿ ತಗೊಂಡು ಬಂದೆ ಹೊಡಿಯಾಕ. (ನೋಡಿ) ನರೇಂದ್ರಪ್ನು ಇಲ್ಲಾ, ಏನ ಎಲ್ಲಾ ಯಿಚಿತ್ರ ಆಗೇತಲ್ಲ!

ಯಮುನವ್ವ— ತಲೀಗೆ ಪೆಟ್ಟು ಹತ್ತೇತೆ. ಹಿಡಿ, ಅವ್ವನ್ನ ಒಳಗ ಮಲಗಿಸಿ ಬರೋನು. (ಕಲ್ಯಾ ನಿರ್ಮಲೆಯ ಕಾಲುಕಡೆ ಕುಳಿತು)

ಕಲ್ಲಪ್ಪ— ಯತ್ತೀ, ಎಂದವಮಾಡ್ತಿ ಮದವೀನಾ,

ಯಮುನವ್ವ— ಎಂತಾ ಹೊತ್ನ್ಯಾಗಲಾ ಮೂಳಾ, ಮದಿವಿ ಸುದ್ದಿ ಕೇಳೋದು. ಹಿಡಿ, ಹಿಡಿ. (ಎತ್ತಿಕೊಂಡು ಹೋಗುವರು.)

ಕಲ್ಲಪ್ಪ— (ವಿಚಾರ ಮಾಡುತ್ತ ಬರುವನು.) ಅಪ್ಪಾ, ಎಲ್ಲಿ ಓಡಿ ಹೋಗಿದ್ದಾನು! ಅವ್ವಾ, ಯಾಕ ಚೀರಿದ್ಲು. ಅಂ? ನಾನು ಘನ ಇಚಾರ ಮಾಡ್ತೇನಿ, ತೆಲೀನ ಓಡವಲ್ತು.

ಪ್ರೇಮನಾಥ— (ಒಳಗಿನಿಂದ) ಕಲ್ಯಾ, ಯಮುನವ್ವಾ, ಏ ಕಲ್ಯಾ, ಯಮುನವ್ವಾ, ನಿರ್ಮಲಾ.

ಕಲ್ಲಪ್ಪ— ಯತ್ತೀ, ದೊಡ್ಡಪ್ಪಾರು ಬಂದ್ರು.

ಯಮುನವ್ವ— ಹೋಗು; ಗಂಟು, ಟಿರೆಂಕು ತಗಂದು ಬಾ.

ಪ್ರೇಮನಾಥ— ಯಮುನವ್ವಾ, ಏ ಕಲ್ಯಾ ಬಹು ಆನಂದದ ಸುದ್ದಿ

ಯಮುನವ್ವ— ಎಪ್ಪಾ ಬಂದ್ಯಾ, ಒಳ್ಳೇ ಯಾಳ್ಳೇಕ್ಕ ಬಂದಿ.

ಕಲ್ಲಪ್ಪ— ಎಟದಿವಸ ಮಾಡಿದ್ರಿ ಬರಾಕ.

ಪ್ರೇಮನಾಥ— ಯಮುನವ್ವಾ ನನ್ನ ನಿರ್ಮಲೆ ಬಹುಭಾಗ್ಯಶಾಲೀ. ಸಲ್ಲಕ್ಷಣ ಸುಗುಣಿ ಸಿರಿಕುವರ ಸಿಕ್ಕನು, ನನ್ನ ಸ್ನೇಹಿತನು ಇದಕ್ಕಾಗಿಯೇ ನನ್ನನ್ನು ಬರಮಾದಿಕೊಂಡಿದ್ದನು. ಅಂತು ನನ್ನ ನಿರ್ಮಲೆಗೆ ತಕ್ಕ ಮನೆ ಸಿಕ್ಕಿತು. ನಿರ್ಮಲಾ, ನಿರ್ಮಲೆಯನ್ನು ಕರೇ ( ಇಬ್ಬರೂ ಗೋಣು ಕೆಳಗೆ ಹಾಕಿ ಸುಮ್ಮನಿರುವರು) ಏಕೆ ? ಕರೆ ನನ್ನ ಮುದ್ದುಮಗುವನ್ನು ಈ ಸುದ್ದಿಯನ್ನು ಅವಳಿಗೂ ತಿಳುಹಿಸುವೆ, ಹೋಗು, ಹೋಗು ಬೇಗಹೋಗು.

ಯಮುನವ್ವ— ಎನ ಹೇಳಬೇಕ್ರಿ, ಅವ್ವಾ ತಲಿವಡದು ಎಚ್ಚರದಪ್ಪಿ ಬಿದ್ದಾಳ.

ಪ್ರೇಮನಾಥ— ನಿರ್ಮಲಾ, ನಿರ್ಮಲಾ. (ಹೋಗುವನು)

ಕಲ್ಲಪ್ಪ—ಯತ್ತಿ ನಿನಗರ ತಿಳದೈತೆ ಯೇನಾತಿದು ಗದ್ಲಅಂಬೋದು

ಯಮುನವ್ವ— ನನಗೆಲ್ಲಾ ತಿಳದೈತಿ ಎನಮಾಡೋದು.

ಕಲ್ಲಪ್ಪ— (ಭುಜಬಡಿದು) ಭಪ್ಪರೇ ನಮ್ಮತ್ತಿ, ನೀನು ಪಕ್ಕಾ ದೊರಳಗ ಆಗದೀ ಪಕ್ಕಾ ಹೆಣ್ಣು. ಯಲ್ಲ್ಯಾ ಗ್ವಾಡೀಮರೀಗೆ ಕಿವಿಗೊಟ್ಟು ಹೊಡಕೊಂಡಾಳ ಸುದ್ದೀನ. ಯತ್ತಿ ಏನದು ಹೇಳಬಾರ್ದ.

ಯಮುನವ್ವ— ನಿನಗ್ಯಾಕ ಬೇಕು. ಸುಮ್ಮಿರು, ನರೇಂದ್ರಪ್ಪಾಯಲ್ಲಿಗೆ ಹೋದ ನೋಡಿಕೊಂಡು ಬಾ,

ಕಲ್ಲಪ್ಪ— ಹೌದತಡಿ ಪತ್ತೇಹಚ್ಚಿಕೊಂಡು ಬರತೀನಿ. ಯತ್ತಿ, ನನ್ನ ಮದವೀ ಕೆಲ್ಸಾ ಆಟಕ್ಕಾ ನಿಂತೆಲ್ಲಾ.

ಯಮುನವ್ವ— ಹೂ, ಅಂದೇನಿ ಸುಮ್ನು ಹೋಗಬಾರದ

ಕಲ್ಲಪ್ಪ— ಹೇ, ಹೌದಲೇ ಹೌದೊ (ಹಾರಿ ಓಡುವನು)

ಪ್ರೇಮನಾಥ— ಹೀಗಾಗಿರಲು ಕಾರಣವೇನು, ನರೇಂದ್ರನು ಮನೆಯಲ್ಲಿರಲಿಲ್ಲವೇ ?

ಯಮುನವ್ವ— ಯಪ್ಪಾ, ನೀವು ಸಿಟ್ಟಾಗೋದಿಲ್ಲ ಅಂದ್ರ ವಂದ ಮಾತು ಹೇಳ್ತಿನಿ.

ಪ್ರೇಮನಾಥ— ಏನದು ?

ಯಮುನವ್ವ— ಈಗಿನ ದಿನಮಾನ ಕೆಟ್ಟಾವು, ಯಾರ್ನ ನಂಬಿ ಜೋಪಾನ ಮಾಡಿರ್ತಿವೊ ಅವನ ಮಗ ಇಸಾ ಆಕ್ಯಾವ.

ಪ್ರೇಮನಾಥ— ಅಂದರೇ ! ನರೇಂದ್ರನೇ ನನಗೆ ದ್ರೋಹ ಬಗೆದಿರುವನೇ.

ಯಮನವ್ವ— ಅಂತಾ ಇಂತಾದು ಮಾಡಿಲ್ಲಾ. ನಿಮ್ಮ ಮಾರಿಗೇ ಮಸಿಹಚ್ಚಿ, ಅಬರೂ ಕಳದಾನ. (ಕಿವಿಯಲ್ಲಿ ಹೇಳುವಳು)

ಪ್ರೇಮನಾಥ— ನರೇಂದ್ರಾ ! ನಿರ್ಮಲಾ....! ( ಎಳೆತಂದು ) ನಿರ್ಮಲಾ, ನಿಜಸಂಗತಿಯನ್ನು ಹೇಳದಿದ್ದರೆ, ನಿನ್ನ ಪ್ರಾಣ ನನ್ನ ಕೈಯಲ್ಲಿ ! ಜಾರಿಣಿ !

ನಿರ್ಮಲಾ— ತಾತಾ, ಜಾರಿಣಿಯಲ್ಲ; ಗೃಹಿಣಿ! ಪತಿಯನ್ನು ವಂಚಿಸಿ ನೀತಿಗೆಟ್ಟ ಜಾರಿಣಿಯಲ್ಲಾ. ಇಂದಿಗೂ ಎಂದೆಗೂ ಜೀವಾಂತ್ಯದ ವರೆಗೂ ಅವನೇ, ಆ ನರೇಂದ್ರ ನನ್ನ ಪತಿ; ನಾನವನ ಸತಿ !

ಪ್ರೇಮನಾಥ— ವಂಶಕ್ಕೆ ಒಬ್ಬಳೇ ಒಬ್ಬ ಮಗಳೆಂದು ಮಮತೆಯಿಂದ ಬೆಳಸಿ, ಬಡವನಾದರೂ ನಿನ್ನನ್ನು ಶಿರಿತನದ ಮನೆಗೆ ಕೊಟ್ಟು, ನಿನ್ನ ಜೀವನವು ಸುಗಮವಾಗಲಿ, ಮಗಳು ಉಂಡುಟ್ಟು ಸುಖದಿಂದ ಬೆಳೆಯಲಿ ಎಂಬ ಆಶೆಯಿಂದ ಗೆಳೆಯನಿಗೆ ಭಾಷೆ ಕೊಟ್ಟು, ನಿನ್ನ ವಿವಾಹವನ್ನು ಮಾಡಬೇಕೆಂದು ಸಿದ್ಧನಾದ ನನಗೆ, ನಿನ್ನ ತಂದೆಯ ಮರ್ಯಾದೆಯನ್ನು ಮಾರಿಸಿದಿ ಥೂ ನಿರ್ಲಜ್ಜಳೇ !

ನಿರ್ಮಲಾ— ತಾತಾ, ನಾನಾವ ಪಾಪವನ್ನು ಮಾಡಿದವಳಲ್ಲ. ಮನವೊಪ್ಪಿ, ಪವಿತ್ರ ಗೃಹಿಣಿಧರ್ಮದಿಂದ, ಆರ್ಯಕುಲಯೋಷಿತೆಯರಿಗೆ ಚ್ಯುತಿ ಬಾರದಿರುವ ಸತ್‌ಪಥದಲ್ಲಿ, ಸನ್ಮಾರ್ಗಿಯಾಗಿ ವರಿಸಿರುವೆ, ಚಂದಿರನ ಸಾಕ್ಷಿಯಾಗಿ ಪತಿಯೆಂದು ಆ ನರೇಂದ್ರನನ್ನು.

**ಪ್ರೇಮನಾಥ—** ಮಿತ್ರನ ಮಗನೆಂದು ಜೋಕೆಮಾಡಿದ್ದಕ್ಕೆ ನಿನ್ನಿಂದ ನನಗಿತ್ತನು ಈ ಪ್ರತಿಫಲವಾ. ಇದುವೇ ಉಂಡಮನೆಗೆರಡುಬಗೆಯುವ ಕುಲಾಧಮರ ನೀತಿ ! ನಿರ್ಮಲೇ, ಅವಿವಾಹಿತಳಾಗಿ ಬಸುರಿಯಾಗಿರುವ ನಿನ್ನನ್ನು ಮನೆಯೊಳಗಿಟ್ಟುಕೊಂಡರೆ, ಸಮಾಜವು ನನ್ನನ್ನಾವಮಟ್ಟಕ್ಕೆ ಮುಟ್ಟಿಸುವದು

**ನಿರ್ಮಲಾ—** ಸಮಾಜ ! ಧರ್ಮದ ಪೊಳ್ಳು ಕೂಗನ್ನೇ ಅಡಗಿಸಬಲ್ಲ ಪವಿತ್ರ ಆತ್ಮದ ಅಮರಪ್ರೇಮ ! ಅದನ್ನು ಮೀರಿದ ಧರ್ಮ ಬೇರಾವುದಿಲ್ಲ. ಆ ನಿರ್ಮಲಾತ್ಮದ ಬಲದಿಂದಲೇ ಕಂಗೊಳಿಸುತಿಹರು ಪಂಚಕನ್ನೆಯರು ಅಮರ ತಾರೆಯರಾಗಿ ಜಗಕಾದರ್ಶರಾಗಿ ಮನವಿಲ್ಲದೇ ಮಾಂಗಲ್ಯವನ್ನು ಕಟ್ಟಿ, ಧನದಾಶೆಗಾಗಿ ಮಗಳನ್ನು ಮಾರಿ, ಆವಳು, ಸತಿಯಾಗಿ, ಸತಿಕುಲಕ್ಕೆ ಕಲಂಕಿಣಿಯಾಗುವದಕ್ಕಿಂತಲೂ ಮನ ಮೆಚ್ಚಿದ ಮನದನ್ನನಲ್ಲಿ, ಅವನೇ ಸರ್ವ ದೈವತವೆಂದು ತಿಳಿದು ಮಾನವತಿಯಾಗಿ ನಡೆಯುವಳೇ ಅವಳೇ ಗ್ರಹಿಣಿ ಸತ್ಕುಲಸತಿಮಣಿ.

**ಪ್ರೇಮನಾಥ—** ನಿಲ್ಲಿಸು ನಿನ್ನ ಬಡಬಡಿಕೆಯನ್ನು. (ಕಪಾಳಕ್ಕೆ ಹೊಡೆದು) ನಿರ್ಮಲಾ ನೀನೆನ್ನ ಸರ್ವ ಭಾಗ್ಯ ಜೀವಿತವೆಂದು ನಂಬಿದ ಭಾವನೆಯು ಬಯಲಾಯಿತು. ನೀನೆನ್ನ ಮಗಳಲ್ಲಾ, ನನ್ನ ಮನೆತನವನೇ ಮಸಣ ಗೂಡಿಸಿದ ಮಾರಿ, ಎನ್ನ ವೃತ್ತ್ಯಕಾರಿ ಎದ್ದೇಳು ಹೊರಬೀಳು ಮನೆಯಿಂದ !

**ನಿರ್ಮಲಾ—** ತಾತಾ, ನಿರ್ದಯನಾಗದಿರು ! ನನ್ನೀಸ್ಥಿತಿಯಲಿ ರಕ್ಷಕರು ನನಗೆ ಯಾರು ,

**ಪ್ರೇಮನಾಥ—**ಯಾವನಿಗಾಗಿ ನಿನ್ನ ಹೆತ್ತಾತನನು ವಂಚಿಸಿ ಬಸುರಿಯಾಗಿರುವಿಯೋ, ಅವನೇ ನಿನ್ನ ರಕ್ಷಕನು. ನಿರ್ಮಲಾ ನಿನ್ನ ರೂಪಾವಲೋಕನದಿಂದ ಹೃದಯದಲಿ ರಕ್ತವು ಕುದಿದೇಳುತಿದೆ ನಡೆ ಆಚೆ ಮುಟ್ಟದಿರು. (ಒದೆಯುವನು)

**ನಿರ್ಮಲಾ—** ತಾತಾ, ತಾತಾ (ಹೊರದೂಡುವನು ಬಾಗಿಲು ಹಾಕುವನು, ಬಾಗಿಲು ಬಡೆಯುತ್ತ ಅಳುತ್ತ) ತಾತಾ, ತಾತಾ, ತಾತಾ.

ಪ್ರೇಮನಾಥ— ಮಮತೆಯಿಂದ ಉಣಲಿಕ್ಕಿ, ಬೆಳೆಸಿದ ಶಿಶುವು ನನ್ನ ವೈರಿಯಾಯಿತೇ! ಮಿತ್ರನ ಮಗನು ಶತ್ರುವಾದನು. ನರೇಂದ್ರಾ, ನನ್ನ ಜೀವಿತವ ನಾಶ ಗೈದ ನರೇಂದ್ರಾ, ನಾನು ನಿನ್ನ ವೃತ್ಯು, ನನ್ನ ಮಗಳು ಜಾರಿಣಿ, ಮದುವೆ ಯಾಗುವ ಪೂರ್ವದಲ್ಲಿ ಆದಳು ಗರ್ಭಿಣಿ, ಮುಖಕ್ಕೆ ಮಸಿ ಬಳಿದ ನನ್ನ ವೃತ್ಯುಕಾರಿಣಿ. ( ಕೆಮ್ಮುತ್ತ ಹಾರ್ಟಫೆಲ್ ಆಗಿ ಸಾಯುವನು )

## ಪ್ರವೇಶ ೨. ಜಂಗಲ್ ರಸ್ತಾ



ನಿರ್ಮಲಾ— ಪದ ರಾಗ : ಚಾಂದ ತಾಳ : ಆಧಾ

ಹೆಣ್ಣಿನ ಜೀವಿತ ಕಷ್ಟದ ಬಾಳು ।
ಹೆಣ್ಣಿಗೆ ವಿಧಿಕೊಟ್ಟ ಇಷ್ಟಿದು ಗೋಳು ।
ಹೆಣ್ಣೆ ಬಾಳಿನ ಕಣ್ಣಲ್ಲವೇ ಹೇಳು ॥ಪಲ್ಲ॥
ಹೆಣ್ಣಿಗೆ ಆಧಾರಾ ಹಡೆದವ್ವ ಒಬ್ಬಳು ।
ಮಣ್ಣಿಗೆ ಹೋದರ ಕಣ್ಣೀರು ಇಡುವಳು ।
ಹೆಣ್ಣಿಗಿ ಹಿತರಿಲ್ಲಾ ಸುತರಿಲ್ಲಾ ಕೇಳು ।
ಹೆಣ್ಣು ಕೆಟ್ಟರೆ ಜಗದಿ ಬೆಲೆಯಿಲ್ಲಾ ಹಾಳು ।

ನಿರ್ಮಲಾ— ಹೆಣ್ಣಿನ ಬಾಳು ದುರಂತ ಕರುಮಕಾಂಡದಿ ಮುಳಿಗೆದ್ದ ಬಾಳು. ತಾಯಿಯನು ಕಾಣದಿದ್ದೆನಗೆ ತಂದೆಯ ಆಶ್ರಯವು ದೂರಾಯಿತು. ಎರವಾದೆ ತವರೂರಿಗಿಂದಿನಿಂದಾ, ನರೇಂದ್ರನೆಲ್ಲಿ ಹುಡುಕಲಿ ಎಲ್ಲೆಂದು ಅವನನ್ನು ಕಾಣದಿಹ ದಾರಿಯನು. ನೋಡದಿಹ ದೇಶವನು ಪರದೇಸಿಯಾಗಿ ಅಲೆದಲಿದು ಸಾಯುವದೊಂದು ದೇಗುಲದಿ. ಹೆಣ್ಣಿನ ಜೀವನಕೆ ತಾಯಿಯ ಆಧಾರವೇ ಹೆಚ್ಚಿನದು. ಹೊತ್ತ ಮಮತೆ, ಹೆತ್ತ ಮಮತೆ, ಬಾಲ್ಯದಾಟ ನೋಡಿ ಅಕ್ಕರದಿ ಬೆಳೆಸಿ, ಗಂಡನ ಮನೆಗೆ ಹರಿಸಿ ಕಳುಹಿಸಿ, ಮೊಮ್ಮಕ್ಕಳನು ಎತ್ತಿ ಮುದ್ದಿಟ್ಟು ನಲಿಯುವ ಮಮತೆ, ಇಂಥಾ ತಾಯಿಯನ್ನು ಕಳೆದುಕೊಂಡ ನಾನೇ ನಿರ್ಭಾಗ್ಯಳು. ಇಂದು ತಾಯಿ ಇದ್ದರೇ, ನನ್ನ

ಬಾಳು ಈ ಗೋಳಿಗೆ ಮುಟ್ಟುತ್ತಿತ್ತೆ. ಅಮ್ಮಾ ಎಂದೊಡೆನೆ ಹೆತ್ತ ಕರುಳು ತನ್ನ ಮಗಳನ್ನು ಮೇಲೆತ್ತಿ ಜೋಪಾಸನೆ ಮಾಡುತಿದ್ದಳಲ್ಲವೇ, ತಾಯಿ, ತಾಯೀ. (ಬೀಳುವಳು. ರೈತ ಹುಲ್ಲಿನ ಹೊರೆಹೊತ್ತು ಹಾಡುತ್ತ ಬರುವನು)

ರೈತ— ಪದ

ನಮ್ಮದಿ ಒಕ್ಕಲನಾಡು । ನಮ್ಮದಿ ಚಿನ್ನದ ಭೂಮಿಯಬೀಡು ।
ಸಿರಿಸಂಪದದ ಸಗ್ಗದ ಗೂಡು । ಇದು ಕರಿನಾಡು ।
ಎಲ್ಲರ ತಾಯ್ನಾಡು । ಕನ್ನಡ ನಾಡು ॥ ಪ ॥
ಅನ್ನಕ್ಕೆ ನೆಲೆಬೀಡು । ಮನ್ನಣೆ ಕಲೆಬೀಡು ।
ಘನತೆ ಪಡೆದ ಒಕ್ಕಲ ನಾಡು ।
ಎಲ್ಲರ ತಾಯ್ನಾಡು ಕನ್ನಡ ನಾಡು ॥ ನಮ್ಮದಿ....

(ನೋಡಿ ತತ್ರಾಣಿಯೊಳಗಿಂದ ನೀರು ಹಾಕಿ ಎಬ್ಬಿಸಿ)

ರೈತ—ಯಾರ ಎವ್ವಾ, ಹಿಂಗ್ಯಾಕ ಅಳತೀದಿ. ಇಲ್ಲಿ ಯಾಕ ಬಿದ್ದಿದ್ದಿ, ಯಾರೂ ಇಲ್ಲಯವ್ವಾ ನಿನಗ.

**ನಿರ್ಮಲಾ—** ತಂದೆ, ನಾನು ಪರದೇಶಿ. ಇರಲು ಮನೆಯಿಲ್ಲಾ, ತಿನ್ನಲು ಕೂಳಿಲ್ಲ!

**ರೈತ—** ಎವ್ವಾ ನಾವು ಒಕ್ಕಲಿಗೇರು. ನಿನ್ನೊಬ್ಬಾಕಿ ಹೊಟ್ಟೆ ನಮಗೇನ ಹೆಚ್ಚಾಕೈತ, ಮಾರಿನೋಡಿದ್ರ ದಿಮ್ಮನ ಮನಶ್ಯಾಳಂಗ ಕಾಣತೈತಿ, ನಡಿಯವ್ವಾ ಹೋಗೂನು. ಒಬ್ಬರಿಗೊಬ್ಬರು ಆಸರಾಗಾಕಬೇಕು.

**ನಿರ್ಮಲಾ—** ಬೇಡ ತಂದೆ, ನನಗಾರ ಆಶ್ರಯವೂ ಬೇಡಾ. ಹೋಗಗೊಡು.

**ರೈತ—** ಎವ್ವಾ ಎಲ್ಲಾರ್ನು ಕಾಪಾಡಾವ ದೇವ್ರು ಅದಾನ. ಎಲ್ಲೆರ ಬಿದ್ದು ಸತ್ತೀ ಅಂದ್ರು, ಹಗಲೆಲ್ಲ ಹುಟ್ಟಿಬರಾಕ ಹುಲ್ಲು ಜೀವಲ್ಲಾ. ನೀ ಸಾಯದಲ್ಲ ಹೊಟ್ಯಾಗಿರೊ ಕಂದಮ್ಮನ್ನ ಕೊಂದು ಪಾಪ ಕಟ್ಟಿಕೊಂತಿಯಾ, ಹುಚ್ಚವ್ವಾ, ನಡೀ ನನಗೂ ಮಕ್ಕಿಲ್ಲಾ. ನೀ ನನ್ನ ಮಗಳಂತಾ ಜ್ವಾಕಿ ಮಾಡತೇನಿ, ಬಾ ಯವ್ವಾ.

## ಪ್ರವೇಶ ೩.



(ಶ್ರೀಕಾಂತನ ಮನೆಯ ಸೀನು, ಮಹಡಿಯಮನೆ, ಖುರ್ಚಿ,ಟೇಬಲ್ಲು (ಫ್ಲಾವರ್ ಸ್ಟ್ಯಾಂಡ್) ಹೂವನ್ನಿರಿಸಿದ ಕಾಜಿನ ಹೂಜೆ, ಶ್ರೀಮಂತಿಕೆ ಠೀವಿ ಕಾಣಬೇಕು.)

**ಅಶೋಕ**— ನರೇಂದ್ರ, ಬೇಗ ಬರುವೆನೆಂದು ಹೇಳಿ, ಇಷ್ಟು ದಿನ ತಡೆದ ಕಾರಣ.

**ನರೇಂದ್ರ**— ಕೆಲಸವಿದ್ದ ಮೂಲಕ ಬರುವದು ತಡವಾಯಿತು, ಕ್ಷಮಿಸು.

**ಅಶೋಕ**— ನನಗೇಕೆ ಆ ಭಾರವನ್ನು ಹೊರಿಸಿದೆ, ನಿನ್ನಂತೆ ನಾನಲ್ಲವೇ ?

**ನರೇಂದ್ರ**— ಮಿತ್ರ, ಯಾವದರಲ್ಲಿ ಕಡಿಮೆಯಿದೆ, ಇಹದ ಸುಖ ಭೋಗಗಳಲ್ಲಿ ನಿನಗೆ! ಶಿರಿ-ಸೌಭಾಗ್ಯಗಳಿಂದ ಸಮೃದ್ಧಿಪಡೆದ ವಿದ್ಯಾವಂತ ನಾದ ನಿನ್ನಲ್ಲಿ ಜನಸೇವೆಯ ಸದುದ್ದೇಶ ಮೈದೋರಿರುವದು ಆದರ್ಶ. ಇದಕ್ಕೆ ನನ್ನ ಕಕ್ಕನದೊಂದು ಆತಂಕ. ನನ್ನನ್ನು ಕಂಡರೆ ಅವನಿಗೆ ಬೇಸರಿಕೆ, ಧನ ವಂತರು ದರಿದ್ರರೆಂಬ ಭೇದವೇಕೆ, ಮಾನವ ಜೀವಿಗಳಲ್ಲಿ ?

**ನರೇಂದ್ರ**— ಈ ವಿಷಯವು ನನ್ನ ಮನಸ್ಸಿನ ಮೇಲೆ ಆಘಾತವ ನ್ನುಂಟುಮಾಡಿದೆ. ಮನುಷ್ಯ ಜೀವನದಲ್ಲಿ ಭೇದವನು ಕಲ್ಪಿಸಿಕೊಂಡು ಬಡಿದಾಡಿ, ರಾಷ್ಟ್ರದ ಅವನತಿಯನ್ನು ತಾವೇ ಮಾಡಿ ಕೊಳ್ಳುವರಲ್ಲದೇ ಮತ್ತೇನು ಮನುಷ್ಯರು ಒಂದೇ ಜೀವನವೂ ಒಂದೇ ಎಂಬ ಭಾವನೆಯು ಸರ್ವರಲ್ಲಿ ಬಂದರೆ ಅದೇ ಮನುಷ್ಯ ಜೀವನ.

**ಅಶೋಕ**— ಆ ಉಚ್ಚ ಸಂಸ್ಕೃತಿ ನೆಲೆಗೊಳ್ಳಲಿಕ್ಕೆ ಇನ್ನೂ ಬಹು ದಿನವಿದೆ. ಭಾರತಕ್ಕೆ ಶಾಂತಿ ಮೂಲ ಮಂತ್ರವನೆ ಜನತೆಯ ಹೃದ್ ಭೂಮಿಯಲಿ ಬಿತ್ತಿ, ಸತ್ಯಾಗ್ರಹದ ನಿಷ್ಠೆಯ ವೀರತ್ವವನು ರಕ್ತನಾಳ ನಾಳಗಳಲ್ಲಿ ತುಂಬಿ, ಅಹಿಂಸೆಯ ತತ್ವದ ಸತ್ವವನು ಸಾರಿ, ಸ್ವಾತಂತ್ರ್ಯದ ಸ್ವಯಂ ಪ್ರಕಾಶವನು ಅಖಿಲ ಹಿಂದಿಯರಿಗೆ ನೀಡಿದ ಪೂಜ್ಯ ಮಹಾತ್ಮಾ

ಗಾಂಧೀಜಿಯುವರ ಸತ್ಫಲಕೆ ಭಾರತೀಯರು ನೀಡುತಿರುವ ಪ್ರತ್ಯುಪಕಾರ ವನು ಕಂಡರೆ, ಮನವು ಉದಾಸೀನ ಸಂತಾಪಗಳಿಂದ ಕುದಿದೇಳುತಿದೆ.

ನರೇಂದ್ರ— ನಿನ್ನ ನುಡಿಯುಃ ಸತ್ಯವನೆ ಸಾರುತ್ತಿದ್ದರೂ ಸಮಾಜೋ ನ್ನತಿಗೆ ಕೇಡು ಕಿಡಿಗಳಂತಿರುವ ಸ್ವಾರ್ಥ ಮಾತ್ಸರ್ಯಗಳು, ಮಾನವನ ಮನವನ್ನು ಆಶ್ರಯಿಸಿರುವದರಿಂದ ಸಮತೆಗೆ ಸ್ಥಳವಿಲ್ಲಾ ಧರ್ಮಕ್ಕೆ ಕಾಲ ವಿಲ್ಲಾ ಏಳಿಗೆಗೆ ಮಾರ್ಗವಿಲ್ಲಾ.

ಅಶೋಕ— ಹುಟ್ಟುವಂದಾಗಿ ಜೀವನವಂದಾಗಿ ಸಾವುವಂದಾಗಿ ಕೂಡಿ ಹೋಗುವ ನಶ್ವರ ದೇಹಾಭಿಮಾನವನವಲಂಬಿಸಿ, ಆತ್ಮ ವಂಚನೆ ಮಾಡಿ, ದಯವನು ದೂರೀಕರಿಸಿ, ಗದ್ದುಗೆಯ ಮೇಲೆ ಧರ್ಮ ಪ್ರವಚನ ವನ್ನೇ ಸಾರಿ, ಅದರಡಿಯಲ್ಲಿ ಅಧರ್ಮ ಕೃತ್ಯಗಳಿಂದ ಬಗೆಬಗೆಯ ಸವಿ ವಿಲಾಸಗಳ ಮೇಲಾಟದಲ್ಲಿ ಲೋಲಾಡುವ ಕೆಲ ಶುಭ್ರ ವೇಷಧಾರಿಗಳಾದ ಡಾಂಭಿಕರು, ನಿಜ ಮಾನವರಾಗಿ ಸರ್ವರೊಂದೆ ಎಂಬ ಮಾನವಿ ನಿಜಧರ್ಮ ವನು ಭಾರತೀಯರ ಜನಮನಗಳಲ್ಲಿ ಬಿತ್ತುವರೋ ಅಂದೇ ಸಮೃದ್ಧಿ ಸಮತೆ ಯುಗವು ಉದಯವಾಗುವದು.

ನರೇಂದ್ರ— ಧನ್ಯ ಮಿತ್ರ, ನಿಜ ಮಾನವನು ನೀನೇ, ನಿನ್ನೊಲವೇ ನನ್ನೊಲವು, ನಿನ್ನಡಿಯೊಳಡಿಯಿಟ್ಟು ಸೇವೆಯಲಿ ದೇಹವನ್ನು ಬಲಿಗೊಡಲು ಸಿದ್ಧನಿರುವೆನು.

ಶ್ರೀಕಾಂತ— (ಒಳಗಿಂದ) ಅಶೋಕಾ, ಅಶೋಕಾ.

ಅಶೋಕ— ಬಂದನು ನೋಡು ಕೃಪಣ ಸಾರ್ವಭೌಮಾ. ನೀನೇ, ಹರಟೆ ಹೊಡೆ ಅವನೊಡನೆ. (ಹೋಗುವನು)

ಶ್ರೀಕಾಂತ— ಮನೆಹಾಳಾ, ಬಡ್ಡಿಹಣವನ್ನು ಎತ್ತಿಹಾಕಿ ಸುಳ್ಳು ನುಡಿದಿಯಾ ಕಳ್ಳ. ( ಹೊಡೆಯುವನು ನರೇಂದ್ರ ತಿರುಗಿ ನೋಡುವನು ) ಯಾರು ನರೇಂದ್ರಾ ಎಂತಹಾತಪ್ಪು ಮಾಡಿದೆ, ಅಶೋಕನೇ ಎಂದು ಕೋಪಾವೇಶದಲ್ಲಿ ಅವನ ಪೆಟ್ಟು ನಿನಗೆ ತಾಕಿತು.

ನರೇಂದ್ರ— ಹೊಡೆದರೇನಾಯಿತು, ಅವನ ನನ್ನಲ್ಲಿ ಭೇದವೇನಿದೆ, ನಾನು ನಿಮಗೆ ಮಗನ ಸ್ವರೂಪನಲ್ಲವೆ.

ಶ್ರೀಕಾಂತ— ನಿನ್ನ ಅವನ ನಡತೆಯಲ್ಲಿ ಭೇದವಿದೆ, ನೀನು ಸರಲ ಸ್ವಭಾವದ ಸುಗುಣಿ, ಅವನು ಮನೆಮುರುಕ, ಅವನ ಹೆಸರು ಉಚ್ಚರಿಸಿದರೆ ನನ್ನ ಸರ್ವಾಂಗ ಉರಿದೇಳುವದು, ಕೈಯಿಟ್ಟಲ್ಲಿ ಕತ್ತರಿಸುವದೆ, ನಾನು ಎಷ್ಟೆಂದು ಕಾಯಬೇಕು. ನಮ್ಮ ವಂಶಕ್ಕೆ ಹುಟ್ಟಿದೆ ಧೂಮಕೇತು.

ನರೇಂದ್ರ— ಬೇರೆಯವರಿಗೆ ಕೇಡುಮಾಡುವ ಬುದ್ಧಿಯಿಲ್ಲವಲ್ಲಾ ಅವನಲ್ಲದೇ ಇನ್ನೊಬ್ಬರಿಲ್ಲ ನಿಮ್ಮ ಮನೆತನಕ್ಕೆ ಅವನೇ ನಿಮ್ಮ ಸರ್ವಸ್ವವಲ್ಲವೆ.

ಶ್ರೀಕಾಂತ— ಏಕೆ ನೀನು ಅವನನ್ನು ಬಹಳ ಸ್ತುತಿಸುವೆ, ಹೂ ನೀನು ಅವನ ಮಿತ್ರನಲ್ಲವೇ ?

ನರೇಂದ್ರ— ನಾನಂದುದರಲ್ಲಿ ತಪ್ಪೇನಿದೆ ನೀವೇ ಇನ್ನೊಂದು ವಿವಾಹವಾಗಿಬಿಟ್ಟರೆ ಅವನ ಆಶೆಯೇ ಕಡಿದು ಹೋಗುವದಲ್ಲಾ.

ಶ್ರೀಕಾಂತ— ನಮಗೇಕೆ ಇನ್ನು ಆ ಆಶೆ.

ನರೇಂದ್ರ— ನಿಮಗೇನು ಅಂತಹ ವಯದ ಭಾರ ಹೊತ್ತು ನಿಂತಿದೆ ನಿರಾಶರಾಗಲು.

ಶ್ರೀಕಾಂತ— ಸಂತಾನ ಅಭಿವೃದ್ಧಿಗೊಳಿಸುವ ಶಕ್ತಿಯೇ ಇಲ್ಲವೆಂದ ಮೇಲೆ ಸೂತ್ರದ ಮೂರ್ತಿಯಾಗಿ ಕೈಗೊಂಬೆ ಆಟವಾಡುವದೇ ಸಂಸಾರ ವೆಂದರೆ.

ನರೇಂದ್ರ— ಒಣಗಿದ ಮರವನ್ನು ಫಲದ್ರೂಪಗೊಳಿಸುವ ಈ ಯುಗದಲ್ಲಿ ನಿಮ್ಮಂತಹ ಭೀಮದೇಹಿಗಳು ಚಿಂತಿಸಬೇಕಾದುದೇನು ?

ಶ್ರೀಕಾಂತ— ನಿಜವಾಗಿ ಆ ಶಕ್ತಿ ನನ್ನಲ್ಲಿರುವದೇ ?

ನರೇಂದ್ರ— ಓಹೋ, ಇರದೇನು ಶ್ರೀಮಂತರೇ ! ಹಲ್ಲುಗಳು ಉದುರಿರುವವೋ, ಮುಖಕಾಂತಿ ಹೀನವಾಗಿರುವದೇ, ದೇಹ ಬಾಗಿರುವದೇ ಏನಾಗಿದೆ ? ನವಯೌವನದ ಕಳೆ ಉಕ್ಕಿ ಹರಿಯುತಿದೆ ಈ ದೇಹದಿಂದ !

ಶ್ರೀಕಾಂತ— ಒಮ್ಮೊಮ್ಮೆ ಈ ವಿಚಾರ ನನ್ನ ತಲೆಯಲ್ಲಿ ಸಂಚಾರ ಮಾಡಿ ಹೋಗುತ್ತದೆ. ನಿಜ ನಿರ್ಧಾರವು ನಿಲ್ಲದಾಗಿದೆ ಮನದಲ್ಲಿ !

ನರೇಂದ್ರ— ಈ ತಪ್ಪು ತಿಳುವಳಿಕೆಯೇ ನಿಮ್ಮ ನಿರ್ಧಾರಕ್ಕೆಡೆಗೊ ಗೊಟ್ಟಿದೆ. ಸುರವೈಕುಂಠಕ್ಕೆ ಸಮವೋಲುವ ನಿಮ್ಮ ಭಾಗ್ಯಶ್ರೀಯನ್ನು ಉಪ ಭೋಗಿಸುವದಕ್ಕಾದರೂ ಅಧಿಕಾರಿಗಳು ಬೇಕಲ್ಲಾ !

ಶ್ರೀಕಾಂತ— ಅಂತಹ ಸುಗುಣಿ ಸುಲಕ್ಷಣ ಕನ್ಯೆಯನ್ನು ಕೊಡ ಲೊಪ್ಪುವರಾರು ನನಗೆ?

ಕಲ್ಲಪ್ಪ— ಎಪ್ಪಾ, ನಿಮ್ಮನ್ನ ಕಾಣಾಕ ಯಾರೋ ಬಂದಾರ್ರಿ.

ನರೇಂದ್ರ— ನೀವು ಹೂಂ, ಎಂದರೆ.... ಅದರ ಹೊಣೆ ನನಗಿರಲಿ. ತಲೆಭಾರವಾಗಿ ಬೆಳೆದು ನಿಂತಿವೆ ಎಲ್ಲೆಲ್ಲಿಯೂ ಹೆಣ್ಣುಗಳು. ಪ್ರಸ್ತಾಪವೆತ್ತಿ ದರೆ ಪ್ರಸ್ತಾ ಮುಗಿದೇಹೋಗುತ್ತಿದೆ.

ಶ್ರೀಕಾಂತ— ಆಗಲಿ, ನಿನ್ನ ಇಚ್ಛೆ ಇದ್ದಂತೆಯೇ ಮಾಡು. ನಾನು ಲಗ್ನದ ವಿಚಾರ ಎತ್ತುವದೇ ತಡ, ಯಾರಾದರೂ ಭೆಟ್ಟಿಯಾಗಲು ಬಂದಿರು ತ್ತಾರೆ. ಇದರಿಂದ ನನ್ನ ಲಗ್ನಕ್ಕೆ ವಿಘ್ನವೆಲ್ಲಿ ಬರುವದೋ ಎಂದು ಅನು ಮಾನ! ನರೇಂದ್ರ, ಕುಳಿತುಕೋ ಬಂದೆ.

ನರೇಂದ್ರ— ಸದ್ಭಾವನೆಯ ಸತ್ಯಶೀಲ ಕುವರ, ಜಿಪುಣತೆಯಿಂದ ಶಿರಿಗದ್ದಿಗೆಯನ್ನೇರಿದ ತಂದೆ, ಇವೆರಡರ ಮಧ್ಯದಲ್ಲಿ ಸಾಹಸದ ಸಸಿಯ ನೆಟ್ಟರೆ, ಬೆಳೆದು ಮಹಾಮರವಾಗದೇ ಎನ್ನಾಶೆಯ ಫಲವೃಕ್ಷ! ಇದುವೇ ಮಾನವನಶಕ್ತಿ, ಇದುವೆ ಮಾನವನಯುಕ್ತಿ, ಇದುವೆ ಮಾನವನ ಮುಕ್ತಿ !

ಕುಸುಮ— (ಬಂದು) ನಮಸ್ತೆ ಅಶೋಕ!

ನರೇಂದ್ರ— ಅಶೋಕನಲ್ಲ; ನರೇಂದ್ರ! ನಮಸ್ತೆ.

ಕುಸುಮ— ಅಂದು ಬರುವೆನೆಂದು ಹೇಳಿ ಹೋದವರು, ಇಂದು ಕಾಣಿಸಿಕೊಂಡಿರಿ. ನಂಬಿದವಳಲ್ಲಿ ಈ ಅಪನಂಬಿಗೆಯ ವರ್ತನೆಯೇಕೆ?

ನರೇಂದ್ರ— ಕುಸುಮಾ ಹೇಳುವಾಗ್ಗೆ ಆ ಭಾನನೆ ಇರಲಿಲ್ಲವಲ್ಲಾ. ಇರಲಿ, ಈಗ್ಗೆ ನಿಮ್ಮನ್ನು ಕಾಣುವದಕ್ಕಾಗಿ ಹೊರಟಿದ್ದೆ. ಪ್ರಾರಂಭಿಸಿದ ನಾಟಕಕ್ಕೆ ಸೂತ್ರಧಾರನು ನಟಿಯನ್ನು ಕಾಣಬೇಕೆನ್ನುವಷ್ಟರಲ್ಲಿ ನಟಿಯ ಪ್ರವೇಶವೇ ಆಗಿ ಹೋಯಿತಲ್ಲಾ.

**ಕುಸುಮ**— ನೀನು ಪ್ರಾರಂಭಿಸುವದು ಆವ ನಾಟಕ.

**ನರೇಂದ್ರ**— ಕುಸುಮಾ ಪರಿಣಯ.

**ಕುಸುಮ**— ಯಾರೊಡನೆ ?

**ನರೇಂದ್ರ**— ಶ್ರೀಮಂತ ಶ್ರೀಕಾಂತರೊಡನೆ(ಗಾಬರಿಯಾಗುವಳು) ಏಕೆ ಭೀತಿಯೇ ಒಪ್ಪಿಗೆಯ ನೀಡಲಾರಿಯಾ.

**ಕುಸುಮ**— ಮುದುಕನಿಗೆ ಬಲಿಗೊಟ್ಟರೇ, ಅದರಿಂದ ನಿನಗೇನು ಫಲ ?

**ನರೇಂದ್ರ**— ಫಲಾಫಲಗಳ ಫಲಿತಾಂಶದ ವಿಮರ್ಶ ನಿನಗೇಕೆ ತಂದೆ ತಾಯ್ಗಳನು ಕಳೆದುಕೊಂಡು ತಬ್ಬಲಿಯಾದ ನೀನು ಸಿರಿತನಕೆ ಒಡತಿಯಾಗಿ ಬೇಡಿದುದೆಲ್ಲವನು ನೀಡಬಲ್ಲ ಸುರತರುವನಾಶ್ರಯಿಸಿ ಸುಖಿಸಲಾರೆಯಾ.

**ಕುಸುಮ**— ಆ ಭಾಗ್ಯದಲ್ಲಿ ಸಮಭಾಗಿಯಾಗಿ ನೀನಿರುವದಾದರೆ ನಿನ್ನಿಚ್ಛೆಯೇ ನನ್ನಿಚ್ಛೆ.

**ನರೇಂದ್ರ**— ಕಾಮಧೇನು ಬಳಿ ಬರುವದಾದರೆ ಬೇಡೆನ್ನಬಹುದೇ? ನೀನೆನ್ನ ಪ್ರೇಮ ದೇವತಾ. ( ಕೈಗೆ ಮುದ್ದಿಡುವನು ಶ್ರೀಕಾಂತ ಬರುವನು )

**ಶ್ರೀಕಾಂತ**— ನರೇಂದ್ರಾ ತಡವಾಯಿತೇ ಬಡವರ ಕಷ್ಟವನ್ನು ಕಣ್ಣಿನಿಂದ ನೋಡುವದಾಗುವದಿಲ್ಲ. ನನ್ನ ಧನವನ್ನೆಲ್ಲಾ ಅವರಿಗಾಗಿ ಬಡ್ಡಿಯಿಂದ ಕೊಡುತ್ತಿರುವೆ. ಕಲ್ಲಾ ಚಹಾ ತೆಗೆದುಕೊಂಡು ಬಾ(ನೋಡಿ) ನರೇಂದ್ರಾ ಬಾ ಇಲ್ಲಿ ಇವರಾರು?

**ನರೇಂದ್ರ**— ಇವರೇ ನಿಮ್ಮವರಾಗಿ ಮನೆಯೊಳಗೆ ಕಾಲಿಡುವವರು.

**ಶ್ರೀಕಾಂತ**— ನೀನು ಬಹು ಕುಚೇಷ್ಟೆಯವನು,ನೀನಂದ ಮಾತು ನಿಜವೇನೋ ?

**ನರೇಂದ್ರ**— ಇನ್ನು ಅನುಮಾನವೇ ನಿಮಗೆ, ಹೇಗಿದೆ ಶ್ರೀಮಂತರೇ

**ಶ್ರೀಕಾಂತ**— ಇವಳ ರೂಪಾವಲೋಕನದಿಂದ ನನಗೆ ಎಲ್ಲದರ ಸ್ಮೃತಿಯೇ ತಪ್ಪಿದೆ ಥ್ಯಾಂಕ್ಸ ಮಿಸ್ಟರ ಬ್ರಹ್ಮ.

**ನರೇಂದ್ರ**— ಕುಸುಮಾತಾಯಿ, ಇವರೇ ಶ್ರೀಮಂತ ಶ್ರೀಕಾಂತರು.

**ಕುಸುಮ**— ನಮಸ್ತೆ ಶ್ರೀಮಂತರೆ.

**ಶ್ರೀಕಾಂತ**— ಹೀ, ಹೀ, ಹೀ, ನಮಸ್ತೇ ನಮಸ್ತೆ.

**ಕುಸುಮ**— ಇಂದು ಇವರ ದರುಶನವು ಲಭಿಸಿರುವದು ನನ್ನ ಭಾಗ್ಯೋದಯವೇ ಸರಿ.

**ಶ್ರೀಕಾಂತ**— ಯಾತರದು ಯಾತರದು.

**ನರೇಂದ್ರ**— ಸಮಕ್ಷಮದಲ್ಲಿ ವಧುವರರ ರೂಪದರುಶನವಾಯಿತು. ಇನ್ನು ನಿಮ್ಮ ನಿಮ್ಮ ಮನೋಭಿಪ್ರಾಯಗಳನ್ನು ನಿರ್ಧರಿಸಿಕೊಳ್ಳಿ.

**ಕುಸುಮ**— ನರೇಂದ್ರ, ಎಲ್ಲವು ನಿನ್ನದೆ. ನನಗೇನು ತಿಳಿಯದು.

**ಶ್ರೀಕಾಂತ**— ಹೌದು ಹೌದು, ಇವಳದು ನಮ್ಮದೂ ಎಲ್ಲವನ್ನು ಮಾಡುವವನು ನೀನೇ, ಇವಳದೆ ನಿನಗೆ ಹೊಸದಲ್ಲ ಪರಿಚಯಾ, ನಮ್ಮದೂ ನಿನಗೆ ಅರಿಯದ್ದಲ್ಲಾ, ಇದೇನು ಹಾಗೆ ಕುಳಿತು ಬಿಟ್ಟೆರಲ್ಲಾ ತಗೆದುಕೊಳ್ಳಿ ಚಹಾ (ಕುಸುಮ ಚಹಾ ಕೊಡುವಳು)

**ನರೇಂದ್ರ**— ಇದೇನು ಕುಸುಮಾತಾಯಿ, ಸೇವೆಗೆ ಪ್ರಾರಂಭಿಸಿದಿರಲ್ಮಾ. ಮನಗಳು ಮಿಲನವಾದ ಮೇಲೆ ನಾವು ಹೊರಗಿನವರೇ ಏಕೆ ಕುಸುಮಾತಾಯಿ.

**ಕುಸುಮ**— ಸಾಕು ನಿಮ್ಮ ಕುಚೇಷ್ಟೆ.

**ನರೇಂದ್ರ**— ಓಹೊ, ಚಿಂತಾಮಣಿಯೇ ಬಂದನಲ್ಲಾ, ಬರಬೇಕು.

**ಚಿಂತಾಮಣಿ**— ನೀವು ಇಲ್ಲೆ ಇರುವಿರಿ, ಓಹೊ ಇವರು ಇಲ್ಲೇ ಇರುವರು ನಮಸ್ತೆ, ನಮಸ್ತೆ.

**ಕುಸುಮ**— ಚಿಂತಾಮಣಿ, ಇವರು ಶ್ರೀಮಂತ (ನರೇಂದ್ರನಿಗೆ ಕೈಯಿಂದ ತಿವಿಯುವಳು)

**ನರೇಂದ್ರ**— ಹಾ, ಹಾ ಶ್ರೀಕಾಂತರು. ನೋಡಿ ಶ್ರೀಮಂತರೇ ಗಂಡನ ಹೆಸರು ಹೇಳಲು ಎಷ್ಟು ನಾಚಿಕೆ.

**ಶ್ರೀಕಾಂತ**— ಛೇ. ಛೇ, (ನಾಚಿ ನಗುವನು)

ಕುಸುಮ— ಇವರ ಹೆಸರು ನರೇಂದ್ರ ಸಾರ್ವಜನಿಕ ಸೇವಾ ಧುರೀಣರು ಬಡವರ ಏಳ್ಗೆಯೇ ಇವರ ಹೆಗ್ಗುರಿ.

ಚಿಂತಾಮಣಿ— ಇವರ ಪರಿಚಯ ನನಗಿದೆ. ಇವರ ಆಶ್ರಯ ದಿಂದಲೇ ನಾನಿಲ್ಲಿ ಪಾಠಶಾಲೆ ಪ್ರಾರಂಭಿಸಿರುವದು ನಮಸ್ತೆ ಶ್ರೀಮಂತರೇ.

ಶ್ರೀಕಾಂತ— ಕುಳಿತುಕೋ ಚಿಂತಾಮಣಿ.

ನರೇಂದ್ರ— ಇವರಿಗೆ ನೃತ್ಯ ಕಲೆಯಲ್ಲಿ ಪೂರ್ಣ ಜ್ಞಾನವಿದೆ. ಚಿಂತಾಮಣಿ ನೃತ್ಯ ಕಲೆಯಲ್ಲಿ ಪರಿಪೂರ್ಣತೆಯನ್ನು ಹೊಂದಿರುವಿಯಾ.

ಚಿಂತಾಮಣಿ— ಹೊ, ಹೊ, ಹೊ, ಭರತ ನಾಟ್ಯ ಪೂರ್ಣ ಅಭ್ಯಾಸಿಸಿದ್ದೇನೆ. ಶುದ್ಧ ಕರ್ನಾಟಕಿ, ಶುದ್ಧ ಹಿಂದುಸ್ತಾನಿಯಲ್ಲಿ ಪರಿಶ್ರಮವಿದೆ. ಅಲ್ಲದೆ, ಭರತನಾಟ್ಯ ವಿಶಾರದ ಕರ್ನಾಟಕ ಗಮಕ ಗುಣಾನ್ವಿತ ಹಿಂದುಸ್ತಾನಿ ಪರಿಜ್ಞಾನ ಪರಿಪೂರ್ಣ ಸಕಲ ವಿದ್ಯ, ಬುದ್ಧಿ, ಸಿದ್ಧಿ, ಸಮೃದ್ಧಿ ಸಾಹಿತ್ಯ ಸಮ್ಮಿಶ್ರಿತ ಕಲಾಲಲಾಮ ಚಿಂತಾಮಣಿ ನಾಟ್ಯ ರಾಜರತ್ನಾ ಎಂದು ಬಿರುದು ಬಂದಿದೆ.

ಕಲ್ಲಪ್ಪ— ಹೆಂಗದಾನ ನೋಡ್ರಿವ ಬುಡುಬುಡುಕ್ಯಾ.

ಚಿಂತಾಮಣಿ— ಸಾಹುಕಾರರೇ, ಕುಸುಮಾ ತಾಯಿಯವರಿಗೆ ಭರತ ನಾಟ್ಯ ಕಲೆಯಲ್ಲಿ ಜ್ಞಾನವಿದೆ?

ನರೇಂದ್ರ— ಓಹೋ, ಇರದೇನು ಶ್ರೀಮಂತರೇ ಕುಸುಮ ತಾಯಿ ಬಹು ಗುಣವಂತಿ. ಮುಂದೆ ಬರಬರುತ್ತಾ ಗೊತ್ತಾಗುವದು, ಇವರ ಗುಣ ನಿಮಗೆ.

ಕಲ್ಲಪ್ಪ— ನೋಡಿದ್ರ ಗೊತ್ತಾಗತೈತಿ ಹುಡಿಗಿಯಂತಾ ಗುಣವಂತಿ ಅನ್ನೋದು, ಆದರಾಗ ಇವರ ಕೈವಾಡದಾಗ ಆಡೇ ತಂದಮ್ಯಾಲೆ ಕೇಳೋದೇನ್ರಿ ಎಲ್ಲಾ ಮುಗದ ಹೋಗೇತಿ.

ಕುಸುಮ— ನರೇಂದ್ರಾ, ಎಷ್ಟೊಂದು ಸ್ತುತಿಸುವದು?

ಶ್ರೀಕಾಂತ— ಇವಳ ಗಂಭೀರ ನಡತೆ, ಉದಾರ ಸ್ವಭಾವ, ನೀತಿ ಶೀಲಗಳನ್ನು ಕಂಡು ನನಗೆ ಅತ್ಯಾನಂದ ವಾಗಿದೆ.

ನರೇಂದ್ರ— ಸಾಹುಕಾರರೇ, ನಾಳೆ ನಿಮ್ಮ ಮದುವೆಯಲ್ಲಿ ಚಿಂತಾ ಮಣಿಯ ಡಾನ್ಸ ಪ್ರೋಗ್ರಾಮಿಗಾಗಿ ಆಮಂತ್ರಣ ಕೊಡಿರಿ.

ಕುಸುಮ— ಅಹುದು, ನಾನಾದರೂ ಅದನ್ನೇ ಹೇಳಬೇಕೆಂದು ಮಾಡಿದ್ದೇ.

ಶ್ರೀಕಾಂತ— ಅಗತ್ಯವಾಗಿ ಇವಳ ಇಚ್ಛೆಯೇ ನನ್ನ ಇಚ್ಛೆ. ಚಿಂತಾ ಮಣಿ ನಮ್ಮ ಲಗ್ನದಲ್ಲಿ ನಿನ್ನ ಡ್ಯಾನ್ಸ ಪ್ರೋಗ್ರಾಮ ಆಗಲಿ.

ಚಿಂತಾಮಣಿ— ತಮ್ಮ ಅನುಗ್ರಹಾ.

ನರೇಂದ್ರ— ನಡೆಯಿರಿ ಶ್ರೀ ಮ ಂ ತ ರೇ , ಸಿನಿಮಾಕ್ಕಾದರೂ ಹೋಗುವಾ.

ಶ್ರೀಕಾಂತ—ಓಹೋ, ಆಯಮ್ ರೆಡಿ. ಕಲ್ಯಾ, ಡ್ರಾಯವ್ಹರನನ್ನು ತರಲು ಕಾರಿಗೆ ಹೇಳು.

ಕುಸುಮ— ಹಾ, ಹಾ, ಅವಸರದಲ್ಲಿ ತಪ್ಪು ಹೇಳಿದಿರಿ. ಕಾರು ತರಲು ಡ್ರಾಯವ್ಹರನಿಗೆ ಹೇಳು.

ಶ್ರೀಕಾಂತ— ಓ, ಆಯಮ್ ಸ್ಸಾರಿ, ಸ್ಸಾರಿ, ಬೇಗ ಡ್ರೆಸ್‌ಮಾಡಿ ಕೊಂಡು ಬರುತ್ತೇನೆ. (ಹೋಗುವನು)

ನರೇಂದ್ರ—ಕಮಾನ್ ( ಕುಸುಮಳ ಕೈಹಿಡಿದು ನಗುತ್ತ ಹೋಗು ವನು. )

ಕಲ್ಲಪ್ಪ— ಎಪ್ಪಾ, ನಿಮ್ಮ ಹೆಸರೇನ್ರೀ,

ಚಿಂತಾಮಣಿ— ಚಿಂತಾಮಣಿ.

ಕಲ್ಲಪ್ಪ— ನಿಮ್ಮ ಹೆಸರು ಚಿಂತಾಮಣಿ, ನಿಮ್ಮ ತಂದಿ ಹೆಸರು ಕುಣಿ ಕೇಣಿ, ನಿಮ್ಮ ಮನೆತನದ ಹೆಸರು ಚಿಣಿಪಿಣಿ ಅಂತ ಇದ್ದಿತ್ಯಾಕ್ರೀ.

ಚಿಂತಾಮಣಿ— ಏ, ಸುಮ್ಮನಿರೊ ಫೂಲ್. (ಹೋಗುವನು)

## ಪ್ರವೇಶ ೪. ರಸ್ತಾ

........

ನಿರ್ಮಲಾ— ತಿರುಗಿ ತಿರುಗಿ ಸಾಕಾಯ್ತು. ನರೇಂದ್ರನ ಮುಖ ವನ್ನು ಕಾಣದಾದೆ, ಹೊಟ್ಟೆಯಲಿ ಸಂಕಟವಾಗುತಿದೆ. ಜಗದೀಶಾ, ನನ್ನಲ್ಲಿ

ನಿನಗಿಷ್ಟು ನಿರ್ದಯತೆಯೇ! ಆವ ಸುಖವಿಲಾಸದಿ ಶಿರಿಮಂದಿರದಲ್ಲಿರುವನೋ! ನರೇಂದ್ರಾ, ಮರುವಾಯಿತೆ ನನ್ನ ನೆನಪು ಅವನಿಗೆ. ಪರಿಚಯವಿಲ್ಲದಿಹ ಆವನ ಸ್ಥಳವನ್ನು ಯಾರಿಂದ ತಿಳಿದುಕೊಳ್ಳಲಿ. ಅಬ್ಬಬ್ಬಾ! ಉರಿಬಿಸಿಲಿನಿಂದ ಉರಿದೇಳುತಿದೆ ಹೊಟ್ಟೆಯಲಿ ಸಂಕಟ! ಈ ಸರವನ್ನು ಮಾರಿ ಹಸಿವೆ ಹಿಂಗಿಸಿಕೊಂಡು ಮತ್ತೆ ನರೇಂದ್ರನ ಶೋಧ.

**ಶಾಮು**— ಓಹೋ! ನೀವು ನಮ್ಮ ಇವರ ಮಗಳಲ್ಲವೆ? ನಿಮ್ಮ ತಂದೆಯ ಹೆಸರೇನೋ ಇದೆ. ಬಹುದಿನವಾದ್ದರಿಂದ ಮರವಾಗಿದೆ.

**ನಿರ್ಮಲಾ**— ಪ್ರೇಮನಾಥ.

**ಶಾಮು**— ಎಸ್, ಪ್ರೇಮನಾಥ. ನಾನು ನಿಮ್ಮ ಊರಿನವನೇ, ನಿಮ್ಮ ಮನೆಯ ಮಗ್ಗಲಲ್ಲಿ ನಮ್ಮ ಮನೆ. ಆಗ್ಗೆ ನೀವು ನನ್ನನ್ನು ಮಾತಾಡಿಸುತ್ತಿದ್ದಿರಿ, ಮರೆತಿರುವಿರಿ ನಿಮ್ಮ ಹೆಸರು ಲೀಲಾ....

**ನಿರ್ಮಲಾ**— ನಿರ್ಮಲಾ.

**ಶಾಮು**— ಎಸ್· ಎಸ್. ನಿರ್ಮಲಾ, ಇದೇನು ಕೈಯಲ್ಲಿ ಸರವನ್ನೇಕೆ ಹಿಡಿದಿರುವಿರಿ.

**ನಿರ್ಮಲಾ**—ಈ ಸರವನ್ನು ಮಾರಿ ನನಗೆ ಹಣ ಕೊಡಿಸಿರಿ. ಬಹಳ ಉಪಕಾರವಾಗುವದಣ್ಣಾ

**ಶಾಮು**— ಓಹೋ, ಯಾರಬೇಡೆನ್ನುವರು ಸಿಷ್ಟರ್ ತನ್ನಿ ಹೋಗುವಾ (ಹೋಗುವಾಗ ಕಲ್ಯಾ ಡಿಕ್ಕಿ ಹೊಡೆಯುವನು)

**ಕಲ್ಲಪ್ಪ**— ಈ ಡಬಲ್ ಚಣ್ಣದ ಮಾದಿಗೆ ಕಣ್ಣು ನೆತ್ತ್ಯಾಗ ಸಿಕ್ಕಂಡಾವ ಮಂದಿನ ಕಾಣಂಗಿಲ್ಲಾ.

**ಶಾಮು**— ಎ ಬ್ಲೆಡಿ ಯಾರೋ ನೀನು?

**ಕಲ್ಲಪ್ಪ**— ನಾ ಎಳ್ರಿ.

**ಶಾಮು**— ನಿನ್ನ ಹೆಸರೇನು?

**ಕಲ್ಲಪ್ಪ**— ಕಲ್ಲಪ್ಪ

**ನಿರ್ಮಲಾ**— ಕಲ್ಲಪ್ಪ (ನೋಡಿ) ಕಲ್ಲಪ್ಪಾ!

ಕಲ್ಲಪ್ಪ— ಯಾರ ನಿರ್ಮಲವ್ವಾ ಅಯ್ಯ ಎಟದಿವಸಕ್ಕ ಕಂಡ್ರಿ ಯವ್ವಾ, ಇವರ್‍ಯಾರು.

ನಿರ್ಮಲಾ— ಈ ಅಣ್ಣನು ಯಾರೋ ನನಗೆ ಗೊತ್ತಿಲ್ಲಾ ಈ ಸರ ವನ್ನು ಮಾರಿ ಹಣ ಕೊಡಿಸಲು ಹೊರಟಿದ್ದಾ.

ಕಲ್ಲಪ್ಪ—ಅಯ್ಯ ಅಣ್ಣಾ, ಈ ಅಣ್ಣಾ ನಿನ್ನ ಮುಂಗೈಗೆ ಎಣ್ಣಿ ಹಚ್ಚಿ ದ್ಹಲ್ಲಾಯವ್ವಾ ತಾರಲೇ ತಾ ಮಂಗ ಹಳೆಮಂಗಾ.

ಶಾಮು— ಎಬ್ಲೇಡಿ ನಾನ್ಸೆನ್ಸ.

ಕಲ್ಲಪ್ಪ— ಅವರು ನಮ್ಮ ದೇಶಬಿಟ್ಟು ಹೋಗ್ಯಾರ ಆ ಯಂಜಲದ ಮಾತು ಮಾತಾಡಬ್ಯಾಡಲೇ ಮೂಳಾ.

ಶಾಮು— ವ್ಯಾನ ಹೀಜ್ ಮಂಕೆ ಪೋಲೀಸರ ತಾಬಾ ಮಾಡೇನು ಕೊಡು ಸರ.

ಕಲ್ಲಪ್ಪ— ಅವರು ನಿಮ್ಮವರ ಆಗ್ಯಾರ್‍ಲಿ ಅದಕ ನಿಮಂಥ ಕಳ್ಳ ಹಗಲೇದರೋಡೆ ಮಂದಿ ಬಾಳಾಗ್ಯೆತೆ ಸುಮ್ನ ಹೋಗು ಒಂದ ಹೊಡತಕ್ಕ ಮೀಸಿ ಬಂದು ಹಣಿಗೆ ಹತ್ಯಾವು ( ಹೋಡೆಯಲು ಹೋಗುವನು ಓಡುವನು) ಯವ್ವಾ ಏನನಿನ್ನಗತಿ ತಂದಿ ಮುಕ ಮಗಳ ನೋಡ್ಲಿಲ್ಲಾ ಮಗಳ ಮುಕ ತಂದಿ ನೋಡ್ಲಿಲ್ಲಾ.

ನಿರ್ಮಲಾ— ಅಂದರೆ ಕಲ್ಲಪ್ಪಾ ತಂದೇ !

ಕಲ್ಲಪ್ಪ— ಸತ್ಯಯವ್ವಾ, ಏನ ಹೇಳಬೇಕು ಎಲ್ಲ ಇಚಿತ್ರ.

ನಿರ್ಮಲಾ— ದುರ್ದೈವಿ ನಿರ್ಮಲಾ, ನಿನ್ನ ಬಾಳು ಹಾಳಾಯ್ತು ಕಲ್ಲಪ್ಪಾ ನಾನೆಂಥಾ ಹತಭಾಗಿನಿ ತಂದೆ ಮುಖವನ್ನು ಕಾಣದಾದೆ.

ಕಲ್ಲಪ್ಪ— ಮಾಡೋದೇನವ್ವಾ, ದೈವದಾಗ ಇದ್ದದ್ದು ತಪ್ಪತೈತೆ, ಸರಾ ಕೊಳ್ಳಾಗ ಹಾಕಿಕೊ. ಎವ್ವಾ, ದೊಡ್ಡ ಊರಾಗ ಹುಶಾರಿ ಇರಬೇಕು ದೊಡ್ಡುರಾಗ ಹೆಂಗಸರ ರೊಕ್ಕಾ ತಿನ್ನಾವ್ರು ಬಾಳಮಂದಿ ಇಂತಾವ್ರು. ಅಪ್ಪಾರು ಇಲ್ಲೇ ಆದಾರ, ಶ್ರೀಕಾಂತಪ್ಪ ಸಾವಕಾರ ಮನ್ಯಾಗ ನನ್ನ ನೌಕ ರಿಗೆ ನಿಲ್ಲಿಶಾರ. ನನ್ನ ಹೆಣ್ತಿ, ನಮ್ಮತ್ತಿ ಇಲ್ಲೇ ಗಿರಣಿ ಕೂಲಿಗೆ ಹೋಗ್ತಾರ

ಬಾ ಎವ್ವಾ, ಅಪ್ಪಾರ್ನ ಭೆಟ್ಟಿ ಮಾಡಸ್ತೀನಿ. ಎವ್ವಾ, ಅವರ ಬರಾಕ ಹೆತ್ಯಾರ ಮಾತಾಡಸ್ರಿ. ನಾ ಕಾಯಿಪಲ್ಲೆ ವೈತೀನಿ ಸಾವಕಾರ ಮನಿಗೆ. (ಹೋಗುವನು. ನರೇಂದ್ರ ಬರುವನು.)

**ನಿರ್ಮಲಾ**— ನರೇಂದ್ರಾ, ನರೇಂದ್ರಾ !

**ನರೇಂದ್ರ**— ( ನೋಡಿ ಗಾಬರಿಯಾಗಿ ಅರಿಯದವನಂತೆ ನಟಿಸಿ ) ಯಾರು ನೀನು ?

**ನಿರ್ಮಲಾ**— ನಾನು ನಿನ್ನ ನಿರ್ಮಲಾ.

**ನರೇಂದ್ರ**— ಯಾವ ನಿರ್ಮಲಾ ?

**ನಿರ್ಮಲಾ**— ನಿರ್ಮಲ ಪ್ರೇಮದಿಂದ ಈ ದೇಹವನ್ನು ನಿನಗರ್ಪಿಸಿದ ನಿರ್ಮಲಾ ! ಹೆತ್ತವರನ್ನು, ಹಿತದವರನ್ನು ಮರೆತು, ನಿನ್ನ ಸೇವೆಗೆ ಧಾವಿಸಿ ಬಂದಿರುವ ನಿರ್ಮಲಾ ! ಅಂತ್ಯದವರೆಗೆ ಅರ್ಧಾಂಗಿನಿಯಾಗಿ ನಿಂತಿರುವ ಧರ್ಮದೇವತೆ ನಿರ್ಮಲಾ !

**ನರೇಂದ್ರ**— ನೀನು, ನನ್ನ ಪತ್ನಿ ?

**ನಿರ್ಮಲಾ**— ಅಲ್ಲದೇನು ?

**ನರೇಂದ್ರ**— ಯಾರು ಹೇಳುವರು ?

**ನಿರ್ಮಲಾ**— ನಿನ್ನವಳಾಗಿರುವ ನಾನಿಲ್ಲದೆ ಹೇಳುವರಿನ್ನಾರು ?

**ನರೇಂದ್ರ**—ಹುಚ್ಚಿನಿಂದಲಿ ಬಡಬಡಿಸುವ ನಿನ್ನ ಭ್ರಮಣಬುದ್ಧಿಯ ನುಡಿ ಕೇಳಿ ಆಚ್ಚರಿಯಾಗುತಿದೆ ಮನಕೆ! ನಿರ್ಮಲ ಪ್ರೇಮದ ತಿರುಳಿಲ್ಲ, ಗಂಡನಾರೆಂಬ ಅರುವಿಲ್ಲ, ಕಂಡವರಿಗೆ ಉಸುರುತಿರುವಿ ನಿನ್ನ ಸತಿಯೆಂದು !

**ನಿರ್ಮಲಾ**— ನಿನ್ನ ಬಿರುನುಡಿಯ ಸಿಡಿಲೆರೆತಝುಳದಿಂದ ಕಮರಿ ಕಪ್ಪಾಯಿತು ನನ್ನ ಶಿಶುವಿನ ಬಾಲ್ಯಜೀವನ! ಅಧಃಪಾತದ ದರಿಯಲಿ ನೂಕುತಿರುವಿ ನಿಷ್ಪಾಪ ಹೃದಯದ ಬಾಲೆಯಾ !

**ನರೇಂದ್ರ**— ಕನಸಿನಲ್ಲಿ ಕಂಡದ್ದನ್ನು ಜಾಗ್ರತೆಯಲ್ಲಿ ನಿಜವೆಂದು ನುಡಿಯುತಿರುವಿ ಹೆತ್ತಿರುವಿ ಆವನಿಗೆ ಶಿಶುವಾ, ಹೊತ್ತು ತಂದಿರುವೆ ನಿನ್ನ ಕರ್ಮದ ಬುತ್ತಿಯ ನನ್ನ ಆಶ್ರಯದಿ ಬೆಳೆಯಗೊಡಲೆಂದು ನೀತಿಯನು ಬಿಟ್ಟಿರುವೆ, ಶೀಲವನು ಬಿಸುಟಿರುವೆ, ಹೆತ್ತವರಿಗೆ ಹಗೆ ಬಗೆದಿರುವೆ ನಡೆ ಅತ್ತ ತೊತ್ತೇ.

**ನಿರ್ಮಲಾ**— ನಿನ್ನ ಕಾಮವಾಸನೆಯ ಆಶಾ ಪೂರ್ತಿಗಾಗಿ ಬಿಗಿದಪ್ಪಿದಿಯಾ ಈ ಕುವರಿಯನು, ನರೇದ್ರಾ ನೀನು ನನ್ನ ನಿಜ ಸತಿಯೆಂದು ನುಡಿಸಿದ ಆ ಧರ್ಮವಾಕ್ಯವೆಲ್ಲಿ, ಪರಿಶುದ್ಧ ಹೃದಯದಿಂದ ನೀನಿತ್ತ ಸತ್ಯ ವಚನವೆಲ್ಲಿ? ಅದೆಲ್ಲ ಟಿಯಲಾಯಿತೀಗ ನಿನ್ನ ಸ್ಮೃತಿ ಪಟಲದಿಂದ ನರೇಂದ್ರಾ.

**ನರೇಂದ್ರ**— ಅರುವು ಮರುವಾಗಿದೆ ಕೇಳಿಲ್ಲ, ಕಂಡಿಲ್ಲ, ನುಡಿಸಿಲ್ಲ, ನಿನ್ನ ದರ್ಶನ ಇದು ನನಗೆ ಮೊದಲು ಹೋಗು ಹೋಗು ತಿರಿದುಂಡು ಜೀವಿಸಿಕೊ.

**ನಿರ್ಮಲಾ**— ನೂಕಿದಿ ನಿಗಿನಿಗಿ ಅಗ್ನಿ ಕುಂಡದಲ್ಲಿ ಈ ಅವ್ಯಾಜ ದೇವತೆಯಾ, ದಿಕ್ಕು ಕಾಣದೇ ಬಿಕ್ಕಿಯ ಸೋಬತಿಯಾಗಿರಿಸಿದಿ ನನ್ನ ಮುಂದಣ ಮಾರ್ಗವಾ.

**ನರೇಂದ್ರ**— ಬೇಡಿದರೆ ನೀಡಬಲ್ಲೆ, ಹಣವನ್ನು ಕಣ್ಮರೆಯಾಗು ಇಲ್ಲಿಂದಾ.

**ನಿರ್ಮಲಾ**—ನೀಡಿದಿಯಾ ನನ್ನ ಕೈಯಲ್ಲಿ ಭಿಕ್ಷಾ ಪಾತ್ರೆಯ, ದೂಡಿದಿಯಾ ಬಯಲು ಖಾನಿನಲ್ಲಿ ನಿಸ್ಸಹಾಯಕಳಾಗಿ ಗೋಳಿಡುತ ಚರಿಸೆಂದು. ನರೇಂದ್ರಾ ನಿರ್ದಯನಾಗಬೇಡಾ. (ಕಾಲು ಬೀಳುವಳು ಎದ್ದು)

**ನರೇಂದ್ರ**— ಮುಟ್ಟದಿರು ನಡೆ ಆಚೆ.

**ನಿರ್ಮಲಾ**— ತಾಯಿ ಇಲ್ಲ, ತಂದೆಯೂ ನನ್ನನ್ನು ಬಿಟ್ಟು ಹೋದನು ನಿರಾಧಾರಳಾದ ನನಗೆ ನೀನೇ ಆಧಾರ, ನಿನಗಾಗಿ ಸರ್ವವನು ತೊರೆದಿರುವೆ, ಕರುಣೆ ಬಾರದಾಯಿತೇ ನಿನಗೆ ಸತಿಸುತರಲ್ಲಿ.

**ನರೇಂದ್ರ**— ಮಾನವನ್ನು ಬಿಟ್ಟು ಸ್ತ್ರೀ ನಡತೆಯನು ತಪ್ಪಿ ಗರತಿ ಗೃಹಿಣಿಯ ಪಾವಿತ್ರ್ಯತೆಯಿಂದ ಚ್ಯುತಳಾಗಿ ಬಾಳಲಿರುವಿ ಹೇಯ ನಡತೆಯಿಂದ.

**ನಿರ್ಮಲಾ**—ನುಡಿಸದಿರು ಅವಾಚ್ಯ ಶಬ್ದಗಳ ನರೇಂದ್ರಾ, ಸ್ತ್ರೀಮಾನ ಶೀಲಗಳ ಗ್ರಹಣಿಧರ್ಮ ಪವಿತ್ರತೆಯಿಂದ ಬೆಳಗುತಿದೆ ಈ ಕನ್ನಡ ಕುಲಪುತ್ರಿ ನಿರ್ಮಲೆಯ ಆತ್ಮತೇಜ, ಸತಿಯ ಪರಿಶುದ್ಧತೆಗೆ ಧರ್ಮ ದೇವತೆಗಳು ತಲೆ ಬಾಗಿರುವದಾದರೆ, ನಿರ್ಮಲ ಸ್ತ್ರೀಶಕ್ತಿಯು ಅಮರವಾಗಿರುವದಾದರೆ, ಇವನೆ

ನಿನ್ನ ನಿಜಪುತ್ರನೆಂದು; ನಾನೇ ನಿನ್ನ ಧರ್ಮದೇವತೆಯೆಂದು ಜಗದ ಜನತೆಗೆ ಮನಗಾಣಿಸದಿದ್ದರೆ ಬಂದೊದಗಲಿ ಜಾರಿಣಿಗೆ ಯಮ ಕೊಡುವ ಶಾಸನಾ,

**ನರೇಂದ್ರ**— ಬಾಯಿಮುಚ್ಚು ನಡೆಇಲ್ಲಿಂದಾ (ಕಪಾಳಕ್ಕೆ ಹೊಡೆದು ಹೋಗುವನು)

**ನಿರ್ಮಲಾ**— ಮಗೂ, ಮಗು ಎಂತಹ ಹತಭಾಗ್ಯಳ ಉದರದಲ್ಲಿ ಜನಿಸಿಬಂದೆ. ನೀನು ದಿಕ್ಕಿಲ್ಲದವನಾಗಿ ಬಿಕ್ಕೆ ಕೂಳಿನಿಂದಲೆ ಬೆಳೆದು ದೊಡ್ಡವನಾಗಬೇಕೆ, ನಿನಗೆ ಎಣ್ಣೆಯಿಲ್ಲ ನೀರಿಲ್ಲ ಹೆಸರಿಟ್ಟು ತೂಗಲು ತೊಟ್ಟಿಲಿಲ್ಲಾ ಮಗೂ.

**ಪದ** ರಾಗ : ಭೈರವ ತಾಳ : ಆಧಾ

ಬಾಳಿ ಬದುಕಲಿಯೇತಕೆ । ನಾ ಬಾಲನೀಗತಿನೋಡಲೂ ।
ಬೆಳೆದ ಬಾಲನಲೀಲೆ ನೋಡಲು । ಕಾಲವೀಗತಿ ನೀಡಿತೂ ।
ಹಾಳು ಬಾಳಿದು ಸಾಕುಜೀವಿತಾ । ಕಾಲನೆ ಎಳೆದೊಯ್ಯೊ ಬಾ ॥

(ಪದ ಮುಗಿಯುವದರೊಳಗಾಗಿ ತೆರೆ ಸರಿದು ಹಿಂದೆಕ್ಕೇರಿ ಸೀನು ಗುಡಿಸಲು ಅದಕ್ಕೆ ಮುಂದೆ ಚಪ್ಪರ ಕಟ್ಟಿ)

## ಪ್ರವೇಶ ೫.

●

**ನಿರ್ಮಲಾ**— ಮಗೂ ಮಗೂ, ಅಮ್ಮಾ ಅಮ್ಮಾಯೆಂದು ಅರಚಿದರೆ ಹಾಲು ತಂದು ಕೊಡಲು ಒಂದು ಬಿಡಿಕಾಸಿಲ್ಲ ಕೈಯಲ್ಲಿ, ಹೀಗಿದೆಯೇ ನಿನ್ನ ದುರ್ಭಾಗ್ಯ ದುರಂತಚಿತ್ರ ಶಿಶುವನ್ನು ಉಡಿಯಲ್ಲಿ ಕಟ್ಟಿಕೊಂಡು ಹಾರುವೆನು ಬಾವಿಯಲ್ಲಿ. (ಒಳಗಿನಿಂದ ಶಿಶುಹತ್ಯ ಮಹಾಪಾಪ, ಶಿಶುಹತ್ಯೆ ಪಾಪ. ಶಿಶುಹತ್ಯ ಮಹಾಪಾಪವೆಂದು ಒಳದನಿ ಬರುತ್ತಿದೆ.) ಶಿಶುಹತ್ಯದ ಪಾಪ ಕಟ್ಟಿಕೊಳ್ಳುವದು ಬೇಡಾ, ಇದುವೇ ಎನ್ನ ಲಿಖಿತದ ಪುಣ್ಯಬಲದಿಂದ ಉದಿಸಿದ ಅನರ್ಘ್ಯರತ್ನ, ಇರಿಸುವೆನೀ ಕಟ್ಟೆಯ ಮೇಲೆ ಯಾರಾದರೂ ತಾಯಂದಿರೂ ದಯಾಳು ತಂದೆಗಳು ಪಾಲನ ಗೈಯಲಿ (ಕಟ್ಟೆಯ ಮೇಲೆ ಮಲಗಿಸುವಳು ಕೂಸು ಅಳುವದು) ಮಗು, ಮಗೂ ( ಅಳುತ್ತ ಹೋಗು

ವಳು. ರೇಣುಕಾ ಕಸದ ಬುಟ್ಟಿ ಕಸಬರಿಗೆ ಹಿಡಿದು ಬಾಗಲಿಗೆ ಹಾಕಿದ ಕೀಲಿ ತೆಗೆಯುವಾಗ ಮಗುವಿನ ಅಳು ಕೇಳಿ ನೋಡಿ)

**ರೇಣುಕಾ**— ಯಾರದೀ ಮಗು, ಎಷ್ಟು ಮುದ್ದಾಗಿದೆ. ಸುಮ್ಮ ನಿರು ನನ್ನಪ್ಪಾ, ಕಂಡ ಕಂಡ ದೇವರಿಗೆ ಹರಕೆ ಹೊತ್ತು ಒಂಭತ್ತು ತಿಂಗಳು ಗರ್ಭ ಹೊತ್ತು ಹೆತ್ತು, ರಾಕ್ಷಸಿಯಂತೆ ಮಗುವನ್ನು ಬಿಟ್ಟು ಹೋದ ಅವಳು ಮಾನವಿಯಲ್ಲಾ ರಾಕ್ಷಸಿ ನಿರ್ದಯಳಾಗಿ ಕೂಸನ್ನು ಕಟ್ಟೆಯ ಮೇಲೆ ಚಲ್ಲಿ ಹೋದ ಆ ಪಿಶಾಚಿಗೆ ತಾಯಿಯ ಕರುಳಿಲ್ಲವೇ, ಮಾಂಸದ ಕರಣಿಯನ್ನು ಬಿಟ್ಟು ಹೋದ ಆವಳು ತಾಯಿಯಲ್ಲಾ ನಾಯಿ. (ಹಿಂದೆ ನಿಂತು ಕೇಳು ತ್ತಿದ್ದ ನಿರ್ಮಲಾ ಅಳುತ್ತ ಕಿವಿ ಮುಚ್ಚಿಕೊಳ್ಳುವಳು)

**ಅಶೋಕ**— ಇದೇನು ರೇಣುಕಾ! ಶಿಶುವನ್ನು ಹಿಡಿದು ಬೀದಿ ಯಲ್ಲಿ ನಿಂತಿರುವದೇಕೆ?

**ರೇಣುಕಾ**— ಒಡೆಯಾ!

**ಅಶೋಕ**— ನೀಡಿದಳೇ ಆವಳಾದರೂ ಅನಾಥೆ ನಿನಗಿದನು.

**ರೇಣುಕಾ**— ಇಲ್ಲ ಬೀಗ ತೆಗೆಯುತಿರುವಾಗ ಈ ಕೂಸನು ಕಂಡೆ, ಯಾರು ಬಿಟ್ಟು ಹೋದರೋ ಕಟ್ಟೆಯ ಮೇಲೆ ಈ ಕೂಸನ್ನು ನಾನರಿಯೆ, ಅಳುವ ಧ್ವನಿಯು ಕೇಳಿ ತಡಿಯಲಾರದೆ ಎತ್ತಿಕೊಂಡೆ, ಯಾವ ಕಂದಮ್ಮ ಗಳಿಗಾದರೂ ತಾಯ್ತನವು ಒಂದೇ ಎಂಬ ಕರುಣೆಯಿಂದ.

**ಅಶೋಕ**— ಆವ ತೊಡಕಿನಲ್ಲಿ ಲೋಕಾಪವಾದದ ಭಯಕ್ಕೆ ಚಲ್ಲಿ ಹೋದಳೋ ನಿಷ್ಪಾಪ ಪಿಂಡವನ್ನು ಅಂದು ಕುಂತಿಯು ತೇಲಿ ಬಿಟ್ಟಳು. ಆ ಅಪವಾದಕ್ಕೆ ಹೆದರಿ ಸೂರ್ಯ ಪುತ್ರನನ್ನು ಆದು ಕೈಸೇರಿ ಬೆಳೆಯಿತು. ಸೂರ್ಯಪುತ್ರನೆಂದು ಇಂದು ಈ ಸತ್ಪುತ್ರ ರತ್ನವು ಸೇರಿದೆ. ಸದ್ಭಾವನೆ ನೀತಿಶೀಲೆ ಹರಿಜನಳಾದ ನಿನ್ನ ಕೈಯಲ್ಲಿ ಭೇದ ಭಾವವಿಲ್ಲದೆ, ಎಲ್ಲರೂ ಎಲ್ಲವೂ ಒಂದೇ ಎಂದು ಒಂದೇ ನೀತಿ ಸಮತೆಯಲ್ಲಿ ಅಖಂಡ ಭಾರತವು ತುಂಬಿ ಹರಿಯಲೆಂಬಾಶೆಯಿಂದ ತನ್ನಾತ್ಮವನೆ ಬಲಿಗೊಟ್ಟ ಮಹಾತ್ಮಾ ಗಾಂಧೀಜಿಯವರ ಅಮರ ಆತ್ಮವು ಆನಂದಿತವಾಯಿತು, ನೀನೆತ್ತಿದ ತಬ್ಬ ಲಿಯ ಕಂದನ ಪಾಲನೆಯಿಂದ.

ರೇಣುಕಾ— ಒಡೆಯಾ, ನಿಮ್ಮ ಹೇಳಿಕೆಯಂತೆ ನಡೆಯುವೆ, ನಾನಿವನ ಪಾಲಕಳಾದರೂ ಈ ಮಗುವಿನ ಏಳಿಗೆಯ ಭಾರ ನಿಮ್ಮದು.

ಅಶೋಕ— ಹೋಗಿ ಬಾ ರೇಣುಕಾ, ಅದು ನನಗಿರಲಿ, ಭಾರ ತಾಂಬೆಯು ನಿನಗಾಗಿ ಒದಗಿಸಿದ ಮಗುವಿನ ಪಾಲನೆಯಿಂದ ಅಮರ ಆದರ್ಶವಾಗಲಿ, ನಿನ್ನ ನಡತೆ ಸಮಾನತೆಯ ನವಯುಗಕೆ.

ಪದ ರಾಗ: ದೇಸಕಿದುರ್ಗ ತಾಳ: ತ್ರಿತಾಳ

ತಾ ನೆನೆಯುತೇ । ಸೀಲಾತಾ । ಸ್ತ್ರೀ ಕುಲಮಾನಾ ॥ ಪ ॥
ತಾರೆ ಅಮರಾಸ್ಮರಣಾ । ಕುಲಭಾವದಿ ಕಾಣದೇ ।
ಕಾಯೆ ನಾಮಾಗುಣಧಾ ॥ ೧ ॥

(ಶಾಡೋದಲ್ಲಿ ನಿರ್ಮಲೆಯ ಮಗು ಅಮರಕಾಂತ ೧೦ ವರ್ಷದವ ನಾಗುವದನ್ನು ತೋರಿಸಬೇಕು.)

## ಪ್ರವೇಶ ೬. ರಸ್ತಾ

ಕಲ್ಲಪ್ಪ— ಎತ್ತಿ ತಡೀತಡೀ ಅಂದ್ರ ಎಲ್ಲಿತನಕ ತಡೀ ಏನಂ ಬೋದು ಈವತ್ತು ಕಡೇ ಮಾತು ಹೇಳಾಕಬೇಕು.

ಯಮುನವ್ವ— ತಮ್ಮ ನಿನಗಾಗೇ ಕೊಡಬೇಕಂತ ಹಡೆದ ಮಗಳ್ನ ಜೀವ ಹೋದ್ರೂ ಬ್ಯಾರೇದವರ ಮನಿ ಹೊಸ್ತಿಲಾ ದಾಟಿಸೇನಾ, ಈಟ ದಿವಸಾ ತಡದೀಯಂತೇ ಇನ್ನ ಸ್ವಲ್ಪ ದಿವಸಕ್ಕ ಹಂಗ ತುರ್ತಿಗೆ ಬೀಳಬ್ಯಾಡ.

ಕಲ್ಲಪ್ಪ— ಅಲ್ಲ ಎತ್ತಿ, ತಡಿ ಅನ್ನಾಕ ಹುಡಿಗಿನರ ಸಣ್ಣದೈತೆ, ಹೂ ಹೋಗಲಿ ಬಿಡು, ತಡದೇ ಅಂತ ತಿಳಕೋ. ಗಜಲಿಂಬಿ ಹಣ್ಣಿನಂತ ಹುಡಿಗಿ ಮಿರಿಮಿರಿ ಮಿಂಚಿನ ಹರೇದ ಬಿಂಕಿನ್ಯಾಗ ಅಡ್ಯಾಡೋ ಮುಂದ, ಕಣ್ಣ ತಪ್ಪಿ ಹಂಗಾಮಿ ಮೈ ಬಿಗುವು ಸಡ್ಲಿತಪಾ ಅಂದ್ರ, ಅಪ್ಪಾ ಅಂದ್ರು ಇಲ್ಲ, ಅವ್ವಾ ಅಂದ್ರು ಇಲ್ಲಲ್ಲ ಯತ್ತೀ.

ಯಮುನವ್ವ—ನಾನೆಂತಾಕಿ ಗೊತ್ತೈತಿಲ್ಲೋ. ಮನಿ ಪಿಂಜರದಾಗ ಹಾಕಿ, ಮಂದಿಗೆ ಮಾರಿ ತೋರಸದಂಗ ಕಾದೀನಿ. ಇಲ್ಲದಿದ್ರ, ಸುಮ್ನ ನಿನ್ನ ದುಡಿಸೇನ ನನ್ನಳಿಯಾ.

ಕಲ್ಲಪ್ಪ— ಈಟ ದಿನ ನಾನು ದುಡದೇನಿ, ಇನ್ನು ಮುಂದ ನಿನ್ನ ಮಗಳ ಗಂಡನಾಗಿ ದುಡಿತೀನಿ, ಲಗು ಹುಡಿಗಿ ಕೈಯಾಗ ಕೊಡು.

ಯಮುನವ್ವ— ನನಗಿರೋದು ಅದ ಆಶೀನ ತಮ್ಮಾ, ನನಗರ ಯಾರ ಆದಾರು. ಹಿಂದಿಂದು ಮಾಡಿದ್ರು ನಿನಗ, ಮುಂದಿಂದು ತಗದಿಟ್ಟು ಕೊಟ್ರೂ ನಿನಗ ಗಂಟು ! ನನ್ನ ಮಗಳು ಚಂದಿದ್ರ ಸಾಕು !

ಕಲ್ಲಪ್ಪ— ಆದರಾತು, ಓಟು ಲಗೂನ ಕೆಲ್ಸಾ ಮಾಡು. ಯತ್ತೀ, ನಾ ದುಡಿಯೋದಕ್ಕ ಹೈ ಗೈ ಮಾಡೋದಿಲ್ಲಾ, ನೀ ಬೇಡಿದ್ದು ಪಾತಾಳದಾಗಿದ್ರೀ, ತಂದ ಕೊಡತೇನಿ. ಆದ್ರ, ತಾಳಿ ಕೆಲಸಾ ಮಾತ್ರ ಮುಂದಹಾಕಬೇಡ

ಯಮುನವ್ವ— ನಿನಕಿಂತ ನನಗ ಆಶಾ ತುಂಬೇತಿ, ಮಗಳ ತಾಳಿ ಯಾವಾಗ ಆದೀತೋ ಅಂತಾ! ಹುಡಿಗ್ಗೀಟು ಬಾಳೇವು ತಿಳಿಲಿ ಅಂತಾ ತಡದೇನಿ.

ಕಲ್ಲಪ್ಪ— ಕೆಟ್ಟಕಾಲ ಯತ್ತಿ, ಯಾವ ಹೊತ್ತಿನಾಗ ಏನ ಆಕೈತೊ ಹೇಳಾಕ ಬರತೈತೆ. ಯತ್ತೀ, ನಾ ಹೇಳಿದ್ದು ಅಯಯಪ್ಪಾ ಲೋಟು....

ಯಮುನವ್ವ— ಅಯ್ಯಯ್ಯ, ಲಸಮಿಪುತ್ರ ನೀನು, ತಾ ನನ್ನ ಹತ್ರ ಇದ್ದಿ.

ಕಲ್ಲಪ್ಪ— ತಗ ಯತ್ತಿ, ನಾ ಹೇಳಿದ್ದು....

ಯಮುನವ್ವ— ಹೂಂ ಅಂದ್ರು, ಆಟ ಸೊನ್ನಿ !

ಕಲ್ಲಪ್ಪ— ಏನ ಸೊನ್ನ್ಯೋ, ಏನ ತಡಿಯೋ, ಯಾದು ತಿಳಿವಲ್ದು. ಹುಡಿಗೀನು ಅಂತಾದಲ್ಲ, ಮತ್ತೀ ನಮ್ಮತ್ತಿ, ಹೆ ಹೆ, ಆಕೀನೂ ಅಂತಾಕೆಲ್ಲ, ಮತ್ತ ನಾ ಹುಡುಗ ಸುಮಾರೇನು ? ಆದೂ ಇಲ್ಲಾ. ಮತ್ತ ನಮ್ಮತ್ತಿ, ಎದಕ್ಕ ತಡಿ ಅಂತಾಳಾ. ಕೇಳಿದ್ರ ಕೊಡತೀನಿ ಅಂತಾಳಾ, ಕೊಡತೀನ್ನಿ, ಕೊಡತೀನಿ ಅಂತಾ, ನಮ್ಮತ್ತಿ ಕೈ ಎಲ್ಲಿ ಕೊಡತಾಳೋ ಅಂತೀನಿ.

## ಪ್ರವೇಶ ೭. ಶ್ರೀಕಾಂತನ ಬಂಗ್ಲೆ



ಶ್ರೀಕಾಂತ— (ಕುಸುಮಳ ಫೋಟೋ ನೋಡುತ್ತ) ರೂಪದಲ್ಲಿ ರಂಭೆ, ಸರ್ವಾಂಗ ಸುಂದರಿ, ನಿರ್ಜೀವ ಚಿತ್ರವಾದರೂ ನನ್ನನ್ನೇ ನೋಡು

ವಂತೆ ಭಾಸವಾಗುವದು. ಇವಳ ಸಮಾಗಮವು ಎಂದಿಗಾಗುವದೋ ಕಾಣೆ ನರೇಂದ್ರನು ಪ್ರಯತ್ನಿಸಿದರೆ ಈ ಕಲ್ಯಾಣ ಶೀಘ್ರ. ಓರೆ ನೋಟದಿಂದ ಚಿಮ್ಮಿ ಬರುವ ಕಣ್ಬಾಣವು ನನ್ನೆದೆಯಲ್ಲಿ ಶೂಲೆಯನೆಬ್ಬಿಸಿದೆ. ಬಾ ನರೇಂದ್ರ ನೊಡು ನನ್ನ ಇವಳ ಜೋಡಿ ಎಷ್ಟು ಅಂದವಾಗಿ ಕಾಣುತಿದೆ ನೋಡು ವವರಿಗೆ (ಅಶೋಕ ಬರುವನು)

**ಅಶೋಕ—** ಚಿಕ್ಕಪ್ಪಾ ಇದಾರ ಭಾವಚಿತ್ರ

**ಶ್ರೀಕಾಂತ—** (ಬಚ್ಚಿಟ್ಟು) ಯಾರದಾದರಿರಲಿ ನಿನಗೇತಕ್ಕೆ

**ಅಶೋಕ—** ನಿಮ್ಮ ಭಾವಿ ಪತ್ನಿಯ ಭಾವ ಚಿತ್ರವೇ ?

**ಶ್ರೀಕಾಂತ—** ಹೌದು.

**ಅಶೋಕ—** ಅವಳನ್ನು ವಿವಾಹವಾಗಲೇಬೇಕೆಂದಿರುವೆಯಾ ?

**ಶ್ರೀಕಾಂತ—** ಅದನ್ನು ನಿರ್ಧರಿಸಿ ಬಹುದಿನವಾಗಿದೆ.

**ಅಶೋಕ—** ಸುಖಮಯವಾದ ನಿನ್ನ ಬಾಳನ್ನು ಹಾಳುಮಾಡಿ ಕೊಳ್ಳುವದಕ್ಕಾಗಿ, ಆ ನಾರಿಗೌತಣ ಕೊಡುವಿಯಾ ?

**ಶ್ರೀಕಾಂತ—** ನನ್ನೀಲಗ್ನ ಸಂಬಂಧದಿಂದ ನಿನಗಾಗುವ ಬಾಧಕ ವೇನು ?

**ಅಶೋಕ—** ಮಾಡಿಕೊಂಡವಳು ಮನೆಯ ಒಡತಿಯಾಗಿ ಮನ ಬಂದಂತೆ ನಿನ್ನಂಕಿತವ ಮೀರಿ ಸ್ವೇಚ್ಛೆಯಿಂದ ನಡೆಯದಿರುವಳೇ, ವಯದ ಭಾರದಿಂದ ಕುಗ್ಗಿರುವ ಈ ದೇಹವು ಅವಳ ಕೈಗೊಂಬೆಯಾಗಿ ಸಂಪದವು ಬಯಲಾಗಿ ಕೊನೆಯಲ್ಲಿ ಬಲಿ ಬೀಳುವದು ಅವಳ ಕೈಯಿಂದ ನಿನ್ನದೇಹ. ಬೇಡ, ಚಿಕ್ಕಪ್ಪಾ ನೀನೆನ್ನ ತಂದೆಯ ಸ್ವರೂಪ ಈ ಸಂಬಂಧಕ್ಕೆ ಎಳ್ಳಷ್ಟು ಮನಗೊಡಬೇಡವೆಂದು ನಿನ್ನ ಕಾಲ್ಬಿದ್ದು ಬೇಡುವೆ.

**ಶ್ರೀಕಾಂತ—** ಓಹೊ, ತಾವು ನನಗೆ ಉಪದೇಶ ಮಾಡಲು ಬಂದಿರುವಿರೋ, ನಿನ್ನ ತಂದೆ ಗಳಿಸಿದ ಸಂಪದವ ನಾನೇನು ಹಾಳುಮಾಡುವದಿಲ್ಲ, ಸ್ವಯಂಬಲದಿಂದ ಗಳಿಸಿದ ಭಾಗ್ಯವನ್ನು ಸೂರೆಮಾಡುವೆ, ನಿನಗದರಲ್ಲಿ ಒಂದು ಕಾಸು ಸಂಭಂಧವಿಲ್ಲಾ ನಿನ್ನ ತಂದೆ ನಿನ್ನ ಹೆಸರಿಲೆ ಬ್ಯಾಂಕಿನಲ್ಲಿಟ್ಟ ೨೫ ಸಾವಿರ ರೂಪಾಯಿಗಳನ್ನು ನಾನೇನು ಕೇಳುವದಿಲ್ಲ.

**ಅಶೋಕ**— ನಿನ್ನ ಭಾಗ್ಯಕ್ಕೆ ಬಾಯ್ತೆಗೆದು ಕುಳಿತವನು ನಾನಲ್ಲಾ, ನಿನ್ನ ಹಿತಕ್ಕಾಗಿ ಆ ಶಬ್ದ ನುಡಿಸಿದೆ ಸತ್ಕಾರ್ಯಗಳಲ್ಲಿ ಮನವಿಟ್ಟು ನಡೆದರೆ ನಿನ್ನ ಭಾಗ್ಯ ಇಮ್ಮಡಿಸುವದು, ಕೀರ್ತಿ ಹೆಚ್ಚುವದು, ನಾಮ ಸಾರ್ಥಕ ವಾಗುವದು.

**ಶ್ರೀಕಾಂತ**— ಭಾಷಣವನ್ನು ಬೆಳಿಸಬೇಡಾ, ಹೋಗು ನಿನ್ನ ಕೆಲ ಸಕ್ಕೆ ಸುಮ್ಮನೇ ತಿಂದಿರುವದನ್ನು ಬಿಟ್ಟು ಉಪದೇಶ ಮಾಡಲು ಬಂದಿದ್ದಾನೆ. ಪಂಡಿತ ಶಿಖಾಮಣಿ.

**ಅಶೋಕ**— ಆಗಲಿ, ಅನುಭವದಲ್ಲಿ ಮನದಟ್ಟಾಗುವದು ಈ ಹಿತ ವಚನ. ( ಹೋಗುವನು )

**ಶ್ರೀಕಾಂತ** — ಈ ಕುನ್ನಿಯನ್ನು ಕಿವಿ ಹಿಡಿದು ಹೊರಗೆ ಹಾಕಿ ದ್ದರೆ, ಎಲ್ಲಿಯಾದರೂ ಬಿಕ್ಕೆ ಬೇಡಿ ತಿನ್ನುತ್ತಿತ್ತು, ಮನೆಯಲ್ಲಿಟ್ಟುಕೊಂಡು ಮಮತೆಯಿಂದ ಸಾಕಿದ್ದಕ್ಕೆ ನನಗೆ ಗುರ್ರೆನ್ನುತ್ತಿದೆ.

**ನರೇಂದ್ರ**— ನಮಸ್ತೆ ಶ್ರೀಮಂತರೇ!

**ಶ್ರೀಕಾಂತ**— ಮತ್ತೆ ಬಂದಿಯಾ, ಓ ನೀನೇ ಬಾ ನರೇಂದ್ರ ಕುಳಿತುಕೊ, ನಾನು ನಿನ್ನ ದಾರಿಯನ್ನೇ ನೋಡುತ್ತಿದ್ದೆ.

**ನರೇಂದ್ರ**— ಅಶೋಕನೆಲ್ಲಿ ?

**ಶ್ರೀಕಾಂತ**— ಕುಳಿತಿರಬಹುದು ಓದುತ್ತಾ, ದುಡ್ಡು ಖರ್ಚುಮಾಡಿ ವಿದ್ಯ ಕಲಿಸಿದೆ, ರಾಜ ಕಾರಣದ ಹಾಳು ಗೊಂದಲದಲ್ಲಿ ಮನವಿಟ್ಟು, ತಲೆ ಕೆಡಿಸಿಕೊಂಡಿದ್ದಾನೆ ಬುದ್ಧಿ ಶೂನ್ಯ.

**ನರೇಂದ್ರ**— ದೇಶ ಜನರ ಏಳ್ಗೆ ಹಾರೈಸುವದೇ ಸದ್ಬುದ್ಧಿ ಜೀವಿಗಳ ಕರ್ತವ್ಯ, ಅವನ ನಡತೆಯು ಆದರ್ಶ.

**ಶ್ರೀಕಾಂತ**— ಹೋಗಲಿ ಬಿಡು, ಈ ಆದರ್ಶ ಪ್ರದರ್ಶನ ಬೇಡಾ. ಈ ಫೋಟೋದೊಳಗಿನ ರಂಭೆಯು ವಿಚಾರವೇನಾಯಿತು ?

**ನರೇಂದ್ರ**— ಶ್ರೀಮಂತರೇ, ಈ ವಿವಾಹಕ್ಕೆ ನಾನೇ ಕಾರಣನೆಂದು ಅಶೋಕನಿಗೆ ತಿಳಿದರೆ, ನನ್ನ ಅವನ ಸ್ನೇಹಕ್ಕೆ ಧಕ್ಕೆ ಬರುವದು. ಆದಕ್ಕಾಗಿ!

**ಶ್ರೀಕಾಂತ**— ನೀನೇಕೆ ಯೋಚಿಸುವಿ, ನನ್ನಿಚ್ಛೆಯನ್ನು ಭಂಗ ಪಡಿಸುವದು. ಅವನೇಕೆ ಅವನಪ್ಪನಿಂದಲೂ ಸಾಧ್ಯವಿಲ್ಲಾ, ನನ್ನ ಮನಸ್ಸಿಗೆ ಬಂದಿರುವದೆಂದ ಮೇಲೆ ರೈಟ್.

**ನರೇಂದ್ರ**— ಸಾರ್ವಜನಿಕ ಹಿತ ದೃಷ್ಟಿಯಿಂದ ಒಂದಾಗಿ ದುಡಿಯುತ್ತಿರುವ ನನ್ನ ಅಶೋಕನ ಸಂಬಂಧಕ್ಕೆ ಧಕ್ಕೆ ಬಾರದಿದ್ದರಾಯಿತು. ಇಂದಿನಿಂದಾ ನೀನು ನನ್ನ ತಮ್ಮನೆಂದು ಭಾವಿಸಿ ಸರ್ವಾಧಿಕಾರವನ್ನು ನಿನಗೊಪ್ಪಿಸಿದ್ದೇನೆ. ಈ ಸಾರೆ ಚುನಾವಣೆಗೆ ಸರ್ವಾನು ಮತದಿಂದ ಆರಿಸಿ ತಂದು ನಿನ್ನನ್ನೇ ಪ್ರಸಿಡೆಂಟನನ್ನಾಗಿ ಮಾಡುತ್ತೇನೆ. ಇನ್ನೇಕೆ ಭಯಾ, ಇರ್‍ಲಿ ನಮ್ಮ ಲಗ್ನದ ವಿಚಾರ ವಧು ಒಪ್ಪಿತೋ ಇಲ್ಲೋ? ನಾನು ಈ ಮನೆ ಹಿರಿತನಕ್ಕೆ ನಿಂತ ಮೇಲೆ ಅವಳು ನಿಮ್ಮನ್ನು ಲಗ್ನವಾಗುವದಕ್ಕೆ ಹೂ ಯನ್ನದಿರುವಳೇ, ಎಲ್ಲ ಸಿದ್ಧವಾಗಿ ನಾಳೆ ಮಾಂಗಲ್ಯಕಾರ್ಯ ಮುಗಿದು ಹೋಗುವದು.

**ಶ್ರೀಕಾಂತ**— ಹಾ! ಇಷ್ಟೆಲ್ಲಾ ನಮ್ಮ ವ್ಯವಸ್ಥೆ ಮಾಡೇ ಬಂದಿರುವಿಯೇನು? ಏನು ಕುಶಲನೇ ಇಂಥಾ ಕುಶಲನೋ? ನನ್ನ ಮನೆತನದ ಮಾನೇಜಮೆಂಟಿಗೆ ಬೇಕಾಗಿತ್ತು. ನಡೆ ನಡೆ. ವಸ್ತ್ರ-ಒಡವೆಗಳನ್ನು ಖರೀದಿ ಮಾಡಿಕೊಂಡು ಬರುವ.

## ಪ್ರವೇಶ ೮. ರಸ್ತಾ



**ಕಲ್ಲಪ್ಪ**— ದೈವಾನ ಅನಬೇಕು ನಾನ! ಸಾಹುಕಾರರ ಮನಿ ಕೆಲಸಾ ಹಗರು, ಬಟ್ಟೆ ನೋಡಿದ್ರ ನಿವಳು ಮತ್ತ ಮ್ಯಾಲೆ ರುಚಿಕಟ್ಟಾದ ಶಿರಿವಂತರ ಮನಿ ಕೂಳು ಈಟ ನಡದೈತೆ. ಪಟ್ಟಣದಾಗ ನಮ್ಮ ಬಾಳು ಲಗು ಮದವಿ ಮಾಡ್ದ ನಮ್ಮತ್ತಿ ಎಲ್ಲಾ ಮಾಡ್ಯಾಳ ನಂದ ಹಾಳು, ಈವತ್ತು ತಲಿ ಕೆಟ್ಟ ಹೊಂಟೇನಿ, ಇಂದ ಾದವೀ ಮುಗಸದಿದ್ರ ನಮ್ಮತ್ತೀದು ಮುಗಿತನ್ನದ ಅಲೆಲೆಲೆ ಮಾತಾಡಿಕೊಂತಾ ಅತ್ತೀ ಮನಿ ಮುಂದೆ ಬಂದ್ನೆಲ್ಲಾ ತಯಾರಾಗೆ ಹೋಗಿ ಕಾಣತೀನಿ. ಅತ್ತೀನ, ಹೇಣತೀನ, ಆ ಮ್ಯಾಲೇನ ಕೇಳ್ತಿ ಗೆಣಿಯಾ ನನ್ನ ಚೈನಿನಾ.

## ಪ್ರವೇಶ ೯.



( ಕನಕಿಯ ಮನೆಯ ಸೀನು )

**ಕನಕಿ**— ನಾವಲ್ಲಿವ್ರೋ, ಮರೇ ಒಲ್ಲೇ.

**ಯಮುನವ್ವ**— ಅಲ್ಲ ಕನಕಿ, ಹೀಂಗ ಸೆಡವು ಸಿಟ್ಟು ಮಾಡಾಕ ನೀ ಏನ ಸಣ್ಣಾಕ್ಯಾ, ಅವಾ ಯಾತ್ರಾಗ ಕಮ್ಮೀ ಅದಾನಂತಾ ನೀ ಒಲ್ಲೆ ಅಂತಿ. ಅವನಿಗರ ಯಾರ ಆದಾರ, ಇದ್ದೊಬ್ಬ ತಾಯಿ ಸತ್ತು ಹುಡುಗಾ ಪರದೇಶಿ ಆಗೇತೇ.

**ಕನಕಿ**—ಪರದೇಶಿ, ದಿಕ್ಕೇಡಿ, ಅವನ್ಹೆಂಗ ಮಾಡಿಕೆಬೇಕ ನಮ್ಮವ್ವ

**ಯಮುನವ್ವ**—ನಾನು ಅವಂದೆಲ್ಲಾ ನೋಡಿನಿ, ನೀನೇನೂ ನೋಡು ಹಂಗಿಲ್ಲ. ಹೂ ಅಂದ್ರ ಬಾಸಿಂಗ ಬಲಾನೂ ತುಂಬಿ ಬಂದೈತಿ, ನನಗ ಸಾಯೋದಿನ ಬಂದಾವು, ಅದನ್ನಿಟು ಕಣ್ತುಂಬಾ ನೋಡ್ತೀನಿ.

**ಕನಕಿ**— ಎವ್ವಾ, ನೀ ಯಾಕ ನನ್ನ ಕಾಡ್ತಿ. ತಂದಿ-ತಾಯಿ ಮಕ್ಕಳಿಗೆ ಲಗ್ನಾ ಮಾಡೋ ದಿನ ಹೋಗ್ಯಾವ. ನೀ ಏನ ಲಗ್ನಾ ಮಾಡಿಕೊಟ್ರು ನನ್ನ ಮನಸಿಗೆ ಹೆಂಗ ಬರತೈತಿ, ನಾ ಹಂಗ ಇರಾಕೀನ.

**ಯಮುನವ್ವ**—ಸಾಕು, ಸುಮ್ನ ಇರು. ಮನ್ಯಾಗ ಹಿರೇರು ಕಿರೇರು ಯಾಕಿರ್ತಾರ, ಅವರೆಲ್ಲ ಹಿಂದಿಂದು ಮುಂದಿಂದು ನೋಡಿ ಇಚಾರ ಮಾಡಿ ಮಾಡಿರ್ತಾರಾ. ಸುಮ್ನ ನನ್ನ ಮಾತಿಗೆ ಹೂಂ ಅನ್ನು.

**ಕನಕಿ**— ಎವ್ವಾ, ನೆರಮನಿ ನಿಂಗೀನ ನೋಡಿದ್ಯಾ, ಹ್ಯಾಂಗಾತು. ಗಂಡನ ಮನಿಗೆ ಹೋಗಿ ವರಸ ತುಂಬಲಿಲ್ಲಾ, ಮಗಳು ಮತ್ತೊಬ್ಬನ ಸಂಗಡ ಆರಾಮು ಅದಾಳ. ಆಕಿ ಏನ ಬೇಡಿದ್ದೆಲ್ಲಾ ಅಂವಾ ಕೊಡಿಶಾನ.

**ಯಮುನವ್ವ**— ಅಯ್ಯಯ್ಯ, ನನ್ನ ಮನಿ ಮರುವಾದಿ ಕಳಿದಿಯೇ ಕನಕಿ. ಬಾಳೀವಂತ್ರು ಅಂತಾ ಅನಿಸಿಕೊಂಡ ಮನೀಗೆ, ಮಸಿ ಹಚ್ಚ ಬೇಕಂತಿಯಾ.

**ಕನಕಿ**— ಯಾರ ಬ್ಯಾಡಂತಾರ ಎವ್ವಾ, ಕರಕೊಂಡು ಬಾ, ಅವನ್ನ ವಂದೀಟು ಕಣ್ತುಂಬಾರ ನೋಡ್ತೀನಿ.

(ಬಾಸಿಂಗ ಕಟ್ಟಿಕೊಂಡು ಮಾಲೆ ಹಾಕಿಕೊಂಡು ಬರುವನು ಮದು ಮಗನಂತೆ)

ಕಲ್ಲಪ್ಪ— ನೋಡದೇನೈತಿ, ತಯ್ಯಾರಾಗೇ ಬಂದೀನಿ ಮ್ಯಾಗಿಂದ ತಳತಂಕಾ ನೋಡೇ ಬಿಡ್ರಿ.

ಯಮುನವ್ವ— ಅಯ್ಯ ಇದೇನು ಬಾಸಿಂಗ ಕಟ್ಟಿಕೊಂಡು ಮದು ಮಗ ಆಗೆ ಬಂದಿಯಲ್ಲಾ.

ಕನಕಿ— ಅಯ್ಯ, ಇವನ ನಾನು ಯಿದ್ಯಾವದೋ ದೊಡ್ಡಾಟ ದಾಗಿನ ಸೋಗು ಬಂತಂತ ಮಾಡಿದ್ದೆ.

ಕಲ್ಲಪ್ಪ— ಹಾ, ಹಲಲಲಲ ಶಾಬಾಶ್ ಸರ್ವಲಕ್ಷಣ ಸಂಪನ್ನನಾಗಿ ಉಡಿಗೆ ತೊಡಿಗೆಗಳಿಂದ ಭೂಸಿತನಾಗಿ, ನಿನ್ನಂ ವರಿಸಲು ಬಂದಿರುವ ಈ ತ್ರಿಭುವನದೊಳ್, ಮೂಲೋಕದ ಗಂಡಾ ಸಮರಾಂಗಣಕ್ಕೆ ಪ್ರಚಂಡ ವೈರಿಯ ಮಿಂಡ ಆ ಧನಂಜಯ ಕೀರೀಟ ಫಲ್ಗುನ ತನೂಭವ, ವೀರ ಅಭಿ ಮನ್ಯುವು ನಾನಲ್ಲವೇನೆ ಮನಮೋಹನರಸಿ ಎನ್ನ ಪ್ರಿಯ ಸತಿ.

ಯಮುನವ್ವ— (ಲಟಗಿ ಮುರಿದು) ಅಯ್ಯ ನೋಡದೇನ, ಹುಡ್ಗಾ ಎಟ ಬುದ್ಧಿವಂತೈತಿ.

ಕಲ್ಲಪ್ಪ— ಆಹೇ ಅತ್ತೇ, ಈ ಸಭಾಮಂಟಪಕ್ಕೆ ಬಂದ ಕಾರಣ ವೇನಂದರೆ ನಿನ್ನ ಸುಪುತ್ರಿಯಾದ ಈ ಕನಕಾಂಗಿಯನ್ನು ಕರಪಿಡಿದು ಕಲ್ಯಾಣ ಮಾಡಿಕೋಬೇಕಂತಾ ಆಗಮಿಸಿದ್ದೇನೆ.

ಯಮುನವ್ವ— ಯಾರಬ್ಯಾಡಂತಾರ ನನ ಹು ಲಿ ಯೆ ! ಹೂಂ ಅಂದಂತೆ ನನಮಗಳು.

ಕಲ್ಲಪ್ಪ—ತಡಮಾಡದೆ ಕನಕಾಂಗಿಯ ಕರಕೊಡು ನನ್ನ ಕೈಯೊಳಗೆ

ಯಮುನವ್ವ— ಅಯ್ಯ ಇದೇನಾ ಬೈಲಾಟದ ಸೋಗಿನ ಮಾತು

ಕಲ್ಲಪ್ಪ— ಯತ್ತಿ ಹಿಂದಕ ಅಭಿಮಾನ್ಯನ ಸೋಗಕಟ್ಟಿದ್ದೆ ನಿನ್ನ ಮಗಳು ಸೋಗು ಅಂದ ಕೂಡ್ಲೆ ಹಂಗ ತಗಂಡೆ ಅಭಿಮಾನ್ಯನ ಮಾತು.

**ಯಮುನವ್ವ**—ಏ ತಮ್ಮ, ಈಳ್ಯೆ ಹಂಚದ ಹಾಲಗಂಬ, ಹಂದ್ರಾ, ಬಜಂತ್ರಿ ಇಲ್ಲದಿದ್ರು ಹೆಂಗ ಹುಡುಗಾ.

**ಕಲ್ಲಪ್ಪ**— ಎತ್ತೀ ಇದು ಸುಧಾರಿಸಿದ ಕಾಲ! ಕಣ್ಣಿಗೆ ಕಣ್ಣು ಕೂಡುದ್ರಾಗ ಕಲ್ಯಾಣಾಗೋ ಕಾಲಾ ಹಾಕು ಕೊಳ್ಳಾಗ ಮಾಲಾ, ಒಳಗಿನ ಅವರ ಇವರ ಮನಸ್ಸು ಒಂದಿದ್ರು ಆತು, ಹೊರಗಿನ ಕೈಗೆ ಕೈ ಯಾರ್ಗೇರ ಯಾವಾಗರ ಕೂಡ್ಕೆವಲದ್ಯಾಕ.

**ಯಮುನವ್ವ**— ರೀತಿನೀತಿ ಹೆಂಗ ಬಿಡಾಕ ಬರತೈತೆ ತಮ್ಮಾ!

**ಕನಕಿ**— ಇದೆಂತಾ ವರ ನೋಡಿದೇಯವ್ವಾ, ಇಂತವ್ನ ಲಗ್ನಾಗಾಕ ನಾ ಒಲ್ಲೆವ್ವಾ.

**ಕಲ್ಲಪ್ಪ**— ಅಲ್ಲ ಎತ್ತಿ ನಾಯಲ್ಲಾ ತೈಯಾರಾಗೆ ಬಂದಿನಿ, ನಿನ್ನ ಮಗಳು ತಾಳೀ ಒಲ್ಲೆ ಅಂದ್ರು ಬಿತ್ತ ನಿನ್ನ ಕೊಳ್ಳಿಗೆ ತಾಳೀ ನಾನೇನು ಕೇಳವಲ್ಲಾ.

**ಯಮುನವ್ವ**— ಅಯ್ಯ ತಡಿಯೆ ಅಳಿಯಾ, ಹಂಗ್ಯಾಕ ದುಡಕ್ತಿ ನೋಡಿದ್ಯಾ ಹುಡಿಗಿ ಕುಲುಕುಲು ನಗತೈತಿ.

**ಕಲ್ಲಪ್ಪ**— ತಾ ಕೈಯ್ಯಾಗ ಕೈ, ಸರ್ವ ವಿಘ್ನ ದೂರ ಸದಾ ಸಂಸಾರ ಸುರಕ್ಷಿತ ಸದಾಸಿವ ಕಾಯುವನಿರುತ ಜಯಾ ಜಯನಮಃ ಪಾರ್ವತಿ ಪತಿ ಹರಹರ ಮಹಾದೇವ.

**ಯಮುನವ್ವ**— ತಮ್ಮ ನಡಿಯ ನಡಿ ನಾಳ್ಗೆ ಮದವಿ ಮುಗಿಸಿ ಬಿಡತೀನಿ.

**ಚಿಂತಾಮಣಿ**— ಇದೇನೋ ಕಲ್ಲಪ್ಪಾ!

**ಕಲ್ಲಪ್ಪ**— ನಮಸ್ಕಾರ್ರಿ ಕುಣಸ ಮಾಸ್ತರ ನಾಳೆ ನನ್ನ ಮದವಿ.

**ಚಿಂತಾಮಣಿ**— ಯಾರೊಡನೆ?

**ಕಲ್ಲಪ್ಪ**— ಅಲ್ಲಿ ನಿಂತಾಳ ನೋಡ್ರಿ ನಮ್ಮ ಅತ್ತಿ ಮಗಳು ನನ್ನ ಆಕೀಗೆ ಕೊಟ್ಟು.

**ಚಿಂತಾಮಣಿ**— ಆ!

**ಕಲ್ಲಪ್ಪ**— ಅಲ್ರಿ ನನ್ನ ಆಕಿಗೆ ಕೊಟ್ಟು ನಾಳೆ ಮದವಿ.

**ಚಿಂತಾಮಣಿ**— ಅಹಾಹಾ! ಕನ್ಯಾ ಎಂಥಾ ಲಕ್ಷಣವಿದೆ, (ನೋಡಿ ನಗುವಳು ಕನಕಿ) ಬುದ್ಧಿಯು ಬಹಳ ತೀಕ್ಷ್ಣವಿದೆ.

**ಕಲ್ಲಪ್ಪ**— ನೋಡಿದ್ರ್ಯಾ ಎಲ್ಲ ನಿಮ್ಮ ಮನಸ್ಸಿಗೆ ಬಂತ ಹುಡಿಗಿ (ಬಾಯ್ತೆರೆದು ಕನಕಿಯನ್ನು ನೋಡುತ್ತಿರುವನು ಚಿಂತಾಮಣಿ) ಕುಣಸಾ ಮಾಸ್ತರ ನಿಮ್ಮನ್ನರೀ ನಾ ಕೇಳಿದ್ದು.

**ಚಿಂತಾಮಣಿ**— ಆ ಹಾ! ನನಗೂ ಸ್ವಲ್ಪ ಜೋತಿಷ್ಯ ಬರುತ್ತದೆ ಹೆಣ್ಣಿನ ಲಕ್ಷಣ ಕಂಡು ಹಿಡಿಯಲಿಕ್ಕೆ.

**ಕಲ್ಲಪ್ಪ**— ಇಂತವು ಏಟ ಮಾಡಿಸಿರಿ ಮದವಿನ ಯಪ್ಪಾ ನಾಳೆ ತಪ್ಪದ ಬಂದು ಒಗಿರಿ ತಲಿಮ್ಯಾಲೆ.

**ಚಿಂತಾಮಣಿ**— ಕಲ್ಲು.

**ಕಲ್ಲಪ್ಪ**— ಅಲ್ರಿ ಅಕ್ಕಿಕಾಳು

**ಚಿಂತಾಮಣಿ**— ಕಲ್ಲಪ್ಪಾ ನಿಮ್ಮ ಸಾಹುಕಾರ ಶ್ರೀಕಾಂತರ ಮದುವೆ ನಿನ್ನೆ ನಡೆದು ಹೋಯಿತು ಕುಸುಮಾ ತಾಯಿಯೊಡನೆ ನಾಳೆ ನಿನ್ನ ಲಗ್ನದಲ್ಲಿ ನಾನು ಡ್ಯಾನ್ಸು ಮಾಡಲು ಬರುವೆ.

**ಕಲ್ಲಪ್ಪ**— ಬ್ಯಾಡ್ರಿ

**ಚಿಂತಾಮಣಿ**— ಯಾಕೆ?

**ಕಲ್ಲಪ್ಪ**— ನಾನು ಮೊದಲೆ ಹೇಳಿನಿ ನಮ್ಮ ಮಂದಿಗೆ

**ಚಿಂತಾಮಣಿ**— ಯಾರಿಗೆ?

**ಕಲ್ಲಪ್ಪ**— ಲಮಾಣೇರಿಗೆ (ಪದ ಹಾಡುತ್ತ ಕುಣಿಯುವನು ತೆರೆ ಬೀಳುವದು)

## ಪ್ರವೇಶ ೧೦. ರಸ್ತಾ



**ನಿರ್ಮಲಾ**— ಹರಿಜನಳಾದ ರೇಣುಕಾ ಮಾತೆಯ ಪಾಲನೆಯಿಂದ ಅಶೋಕನ ಕೃಪಾದೃಷ್ಟಿಯಿಂದ ಬಿದಿಗೆಯ ಚಂದ್ರನಂತೆ ಪ್ರಫುಲ್ಲಿತವಾಗಿ ಬೆಳೆದು

ಹೆತ್ತುವರ್ಷದ ಬಾಲನಾಗಿ ಮೆರೆಯುತ್ತಿರುವನು ಅಮರಕಾಂತನೆಂಬ ಮುದ್ದು ನಾಮದಿ ನಾ ಹತಭಾಗಿನಿ ಮಗುವನ್ನು ಪರರ ಉಡಿಯಲ್ಲಿ ಚಲ್ಲಿದ ನರರಾಕ್ಷಸಿ ರೇಣುಕಾ ನೀನು ನಿಜ ತಾಯಿ.

ಪದ

ಭಾರತ ಮಣಿಯಾ ತೇಜದ ಸತಿಯಾ । ಚರಿತೆ ಅಮರಾ !
ಶೀಲದ ಶೋಭೆಯಾ । ಶಾಶ್ವತ ಸತತಾ ।
ಪತಿಪದ ಧ್ಯಾನಾ, ನಾಮಾ ॥ಪ॥

(ಹೋಗುವಾಗ ಧ್ವನಿ ಕೇಳಿ ನಿಲ್ಲುವಳು ಅಮರಕಾಂತ ಒಳಗಿನಿಂದ ಓಡಿ ಬರುವನು ಹತ್ತು ವರ್ಷದ ಹುಡುಗ)

**ಅಮರಕಾಂತ**— ಅಮ್ಮಾ, ಅಮ್ಮಾ, (ಓಡಿ ಬರುವನು)

**ರೇಣುಕಾ**— ಮಗು ಅಮರಕಾಂತಾ (ಒಳಗಿನಿಂದ)

**ಅಮರಕಾಂತ**— ಅಮ್ಮಾ, ಅಮ್ಮಾ, (ಓಡಿ ಹೋಗುವನು)

**ರೇಣುಕಾ**— ಆಮರಕಾಂತಾ ಎಷ್ಟು ತುಂಟನಾದೆಯಪ್ಪಾ ನೀನು ಸ್ವಲ್ಪ ಕಣ್ಣುತಪ್ಪಿದರೆ ಓಡುವೆ ಬೀದಿಗೆ, ಕಣ್ಣಿಗೆ ಕಾಣದಾದನೆ, ಮಗು ಆಮರಕಾಂತಾ (ಬೆನ್ನಟ್ಟಿ ಹೋಗುವಳು)

(ಮರೆಯಲ್ಲಿ ನಿಂತವಳು ಮುಂದೆ ಬಂದು)

**ನಿರ್ಮಲಾ**— ಅಮರಕಾಂತಾ, ಏನು ಮುದ್ದಾದ ಹೆಸರು. ಮಗು ಹೂಂ, ನನ್ನದಾ ಮಗು. ಹೆತ್ತವಳು ನಾನು, ಪಾಲಿಸಿ ಹೆಸರಿಟ್ಟು ಕರೆದವಳು ನೀನು, ನಾನಲ್ಲ. ನಾ ಹತಭಾಗಿನಿ, ನೀನೇ ನಿಜತಾಯಿ. ಜಾತಿಭೇದದಿಂದ ಧೇಶದ ಶಾಂತಿ ಸೂತ್ರವನ್ನೇ ಕಡೆದೊಗೆವಾ ಅಧಃಪತನದ ಅಂಧತೆಯಲ್ಲಿ ! ಮಿಣುಗಲಿದೆ ಜಗದ ಜನತೆಗೆ ಮಾರ್ಗದರ್ಶಕಮಾಗಿ ಅಮರ ತಾರೆ.

(ಹೋಗುವಳು)

(ನರೇಂದ್ರನ ಕೈಯೊಳಗೆ ಕೈಹಾಕಿ ನಗುತ್ತ ಕುಸುಮ ಬರುವಳು.)

**ಕುಸುಮ**— ನರೇಂದ್ರ, ಟಾಯಿಮ್ ಆಯಿತು. ಪತಿದೇವರೇನು ತಿಳಿದುಕೊಳ್ಳುವರೋ ಏನೋ !

**ನರೇಂದ್ರ**— ತಿಳದುಕೊಳ್ಳುವದೇನು? ನಮ್ಮಿಬ್ಬರ ನಡುವೆ ಸಾಕ್ಷಿ ಯಾಗಿದೆಯಲ್ಲಾ ಸಿನೇಮಾ! ಅದೇ ಕಾರಣ. ನಡೆಯಿರಿ, ನಿಮ್ಮನ್ನು ಬಂಗ ಲೆಗೆ ಬಿಟ್ಟು ಬರುವೆ.

**ರೇಣುಕಾ**— ಅಮರಕಾಂತಾ, ಮಗು ಅಮರಕಾಂತಾ (ಒಳಗಿ ನಿಂದ ಕೂಗುವಳು.)

**ಅಮರಕಾಂತ**— ಅಮ್ಮಾ, ಅಮ್ಮಾ (ಓಡಿಬಂದು ಕುಸುಮಳಿಗೆ ತೆಕ್ಕೆ ಬೀಳುವನು.)

**ಕುಸುಮ**— ಯಾರದೀ ಮಗು. ಎಷ್ಟು ಮುದ್ದಾಗಿದೆ.

**ರೇಣುಕಾ**—ಶಾಲೆಗೆ ಹೋಗೆಂದರೆ ಹಟಮಾಡಿ ಓಡಿಬರುವಿಯಾ? (ನೋಡಿ) ಮಗೂ ಮುಟ್ಟಬಾರದಪ್ಪ ಅವರನ್ನು. ಕೋಪಿಸಿಕೊಂಡಾರು!

**ಅಮರಕಾಂತ**—ನಾನೊಲ್ಲೆ. ನೀನು ನನ್ನನ್ನು ಆಡಲು ಬಿಡುವದಿಲ್ಲ

**ಕುಸುಮ**— ನೀನಿವನ ತಾಯಿಯೇ?

**ರೇಣುಕಾ**— ಹೌದಮ್ಮಾ!

**ಕುಸುಮ**— ನಿನ್ನ ಹೆಸರು?

**ರೇಣುಕಾ**— ರೇಣುಕಾ!

**ಕುಸುಮ**— ನೀನಾವ ಮತದವಳು?

**ರೇಣುಕಾ**— ನಾ, ನಾನು ಹರಿಜನಳು!

**ಕುಸುಮ**— ನಡೆ, ಆಚೆ ಹೊಲೆಯಾ, (ದೂಡುವಳು)

**ಅಮರಕಾಂತ**— ಅಪ್ಪಾ, ಅಪ್ಪಾ (ಬಿಗಿದಪ್ಪುವನು)

**ನರೇಂದ್ರ**— (ಸ್ವಗತ) ಈ ಧ್ವನಿಯು ನನ್ನಂತರಂಗದಲ್ಲಿ ತಳಮಳ ವನ್ನುಂಟು ಮಾಡಿತೇಕೆ? ವಾತ್ಸಲ್ಯ ಹುಟ್ಟುತಿದೆ, ಸರಿ ಹಿಂದಕ್ಕೆ! (ಒದೆ ಯುವನು.)

**ರೇಣುಕಾ**— ಏಳು ಮಗು, ಅವರನ್ನೇಕೆ ಮುಟ್ಟಲು ಹೋದೆ.

**ಅಮರಕಾಂತ**— ಬಿಡಮ್ಮಾ ತಂದೆ ಮಗನನ್ನು ಒದ್ದರೆ ತಪ್ಪೇನು?

**ನರೇಂದ್ರ**— (ಸ್ವ) ಈ ಶಬ್ದ ಹೃದಯವನೇ ಆನಂದದಿಂದ ಚೇತನ ಗೊಳಿಸುತಿದೆ, ಅವ್ಯಕ್ತ ಶಕ್ತಿ ಆವದೋ ನೆನುವನು ನೀಡುತಿದೆ.

**ಕುಸುಮ**— ಹೊಲೆಯ ಕಂಡ ಕಂಡವರಿಗೆ ತಂದೆಯೆಂದರೆ ಕೆನ್ನೆ ಕೆಂಪಾದೀತು. (ಹೊಡೆಯುವಳು ಕಪಾಳಕ್ಕೆ)

**ಅಮರಕಾಂತ**— ಅಮ್ಮಾ ಅಮ್ಮಾ! (ಬೀಳುವನು)

**ಕುಸುಮ**— ಎಲೇ ಹೊಲತಿ ಎತ್ತಿಕೋ ನಿನ್ನ ಮಗುವನ್ನು.

**ರೇಣುಕಾ**— ಅಮ್ಮಾ! ಹೊಲೆಯಿಂದ ಬಂದ ಈ ದೇಹಕ್ಕೆ ಬೇರೆ ಹೊಲೆ ಉಂಟೇ? ಹೊಲೆ ಈ ಶಬ್ದವನು ತಿಳದ ಮಾನವರಲ್ಲಿ ಭೇದ ವುಂಟೇ? ಅಮ್ಮ ಪತಿಯನು ಬಿಟ್ಟು ಮನ ಬಂದವರಲ್ಲಿ ರತಿಸುಖವ ಬಯ ಸುವಳು ಹೊಲತಿ. ಸಕಲರನ್ನು ಸಮದೃಷ್ಟಿಯಲ್ಲಿ ಕಾಣದಿರುವನೇ ಹೊಲೆಯಾ, ಸಮಭಾವವಿಲ್ಲದ ನಿನ್ನ ಮನದಿಂದ ರೋಮ ರೋಮದಲಿ ಹೊರಚಿಮ್ಮಿ ಕಾಣುತಿರುವ ನಿನ್ನ ದುರ್ನಡತೆಯು ಸಾರಿ ಸಾರಿ ಹೇಳುತಿದೆ, ನೀನು ನಿಜ ಹೊಲತೆಯೆಂದು.

**ಕುಸುಮ**— ಶಟಅಪ್ ಯುವರ ಮೌಥ! ಮನ ಬಂದಂತೆ ಬೊಗಳುತಿರುವಿಏನು? (ಕಪಾಳಕ್ಕೆ ಹೊಡೆದು ಹೋಗುವಳು)

**ರೇಣುಕಾ**— ಪೆಟ್ಟು ತಾಕಿದೆ ಮಗುವಿಗೆ! ದೀನಬಂಧು ಪರಮೇ ಶ್ವರಾ ನಡೆ ಮಗು. (ಹೋಗುವರು)

(ಡ್ರಾಪ್‌ಸೀನ)

## ಪ್ರವೇಶ ೧೧. ನರೇಂದ್ರನ ಕೋಣೆ

**ನರೇಂದ್ರ**— ಮನವು ಕೊರೆಯುತಿದೆ! ಅಪ್ಪಾ ಎಂಬ ಮಗುವಿನ ಮಮತೆಯ ಶಬ್ದ. ಅವನೆನ್ನ ಮಗನೇ ಮಗನಾಗದಿದ್ದರೇ ಕರುಳೇಕೆ ಮಿಡು ಕಿತು. ಅವನ ಕೂಗಿಗೆ ರೇಣುಕಾ ಆ ಮಗುವಿನ ತಾಯಿಯೇ ಸ್ಮೃತಿ ಪಟಲದ ಮೇಲೆ ಮೂಡತಿದೆ. ಗತಚರಿತೆಯ ಛಾಯೆ ವೈ-ಮರೆತರೆ ಮೃತ್ಯು ಮಸ್ತ ಕದ ಮೇಲೆ ಹಸ್ತ ನೀಡಿದೆ. "ವಿಧಿಬರಹವಿಂತಿಹುದೆ" (ನಕ್ಕು) ಮಿಕ್ಕಿದ ಕುತ್ತುಗಳ ದಕ್ಕಿಸಿಕೊಳ್ಳುವ ಮಹಾ ಶಕ್ತಿ ಈ ವ್ಯಕ್ತಿಯಲ್ಲಿರಲು ಅದೊಂದು ತೃಣವನ್ನು ಮುರಿದೊಗೆಯುವದು ಎಷ್ಟರ ಕೆಲಸ ಕಲ್ಯಾ.

ಕಲ್ಲಪ್ಪ— ಯಾಕ್ರಿಧಣಿ

ನರೇಂದ್ರ— ಭೀಮನನ್ನು ಕಳುಹಿಸು (ನಿರ್ಮಲಾ ಕಿಡಿಕಿಯಲ್ಲಿ ನೋಡುತ್ತ ನಿಂತಿರುವಳು)

ಭೀಮ— ಕಾಲಿಗೆ ಬಿಳ್ರಿಯಪ್ಪಾ, ಯಾಕಧಣಿ

ನರೇಂದ್ರ— ಇಂದು ರಾತ್ರಿ ಒಂದು ಮಹತ್ಕಾರ್ಯವನ್ನು ಮಾಡ ಬೇಕಾಗಿದೆ.

ಭೀಮ— ಹೂರಿ ಕಾಲಿಗೆ ಬಿಳ್ರಿಯಪ್ಪಾ ನಿಮ್ಮದು ಕಾರ್ಯಮಾಡ ತೀನಿ ಸುಳ್ಳಾಡವಲ್ಲಾ

ನರೇಂದ್ರ— ಇಂದು ರಾತ್ರಿ ಹರಿಜನ ಕೇರಿಗೆ ಹೋಗಿ ರೇಣುಕೆಯ ಗುಡಿಸಲಿನಲ್ಲಿರುವ ಅವಳ ಮಗನನ್ನು ಕಡಿದು ಬರಬೇಕು ನಿನಗೆ ೧೦೦೦ ರೂಪಾಯಿ ಕೊಡುತ್ತೇನೆ, ನಿನಗಾವ ಭಯ ನಾನಿದ್ದೇನೆ.

ಭೀಮ— ಆಗಲಿ ನಸತಂದೆ ಇವತ್ತು ಆಕೆಲಸ ಮಾಡೇ ಮಕಾ ತೊರ್‍ಸವಾ, ಇಲ್ಲದಿದ್ರ ಈ ಮಿಸಿಯಾಕೆಪ್ಪಾ ಕಾಲಿಗೆ ಬಿಳ್ರಿಪ್ಪಾ.

ನರೇಂದ್ರ— ಹಣವೇನಾದರೂ ಬೇಕೆ ?

ಭೀಮ— ಯದಕ್ಕ ಕುಡಿಯದ್ಕೆನೆಪ್ಪಾ ಆದಾದ್ರ ಹುರುಪಿದಕ್ಕ ಯಪ್ಪಾ ದೇವಿ ರಾಕ್ಷೇಸಿರ್‍ನ ಕೊಲ್ಲಬೇಕಾದ್ರ ಕುಡದಿದ್ಲಂತೆ, ಅಂದಮ್ಯಾಕ ಅದರಾಗಯೇಟ ಶಕತಿಯಿದ್ದೀತು

ನರೇಂದ್ರ— ಬಾ ಹಣವನ್ನು ಕೊಡುತ್ತೇನೆ (ಡ್ರಾದೊಳಗೆ ಪಿಸ್ತು ಲಿಟ್ಟು ಹೋಗುವನು. ನಿರ್ಮಲೆ ಬಂದು ಡ್ರಾದೊಳಗಿನ ಪಿಸ್ತುಲು ತಗೆದು ಕೊಂಡು ಹೋಗುವಳು. ನರೇಂದ್ರ ಜಮಾದಾರ ಬರುವರು)

ಜಮಾದಾರ— ನಮಸ್ತೆ ನರೇಂದ್ರ

ನರೇಂದ್ರ— ಬರಬೇಕು ಜಮಾದಾರ ಸಾಹೇಬ

ಜಮಾದಾರ— ಮೊನ್ನೆ ನಿಮ್ಮ ದರೊಡೆ ಪ್ರಕರ್ಣವು ನಡೆದಾಗ್ಗೆ ನಾನು ಗಸ್ತಿಯಲ್ಲೇ ಇದ್ದೆ ನಿಮ್ಮ ಸಂಗಡಿಗರನ್ನು ಯಾರ ಕಣ್ಣಿಗೆ ಬೀಳದಂತೆ ಪಾರು ಮಾಡಿದೆ.

ನರೇಂದ್ರ— ನಿನಗೊಂದು ಪಾಲು ಇದ್ದೇ ಇದೆಯಲ್ಲ.

ಜಮಾದಾರ— ಅಯ್ಯೋ! ನಿಮಗೆ ನಾನು ಹೊರತಿರುವೆನೇ? ನೋಡಿ, ನಾನು ಸರಕಾರಿ ನೌಕರಾ. ಇದರಲ್ಲಿ ನನ್ನ ಹೆಸರು ಹೊರಬಾರದಂತೆ ನೋಡಿಕೊಂಡು ಬರುವದು ಶಮ್ಮನ್ನೇ ಕೂಡಿದೆ!

ನರೇಂದ್ರ— ಎಷ್ಟು ಅಳ್ಳೆದೆ ನಿನ್ನದು. ನಾಸಿರಲು ಭಯಪಡುವದೇಕೆ? ತೆಗೆದುಕೋ. (ಹಣವನ್ನು ಕೊಡುವನು)

ಜಮಾದಾರ— ಹಿ, ಹೀ, ಬರುತ್ತೇನೆ ಕರುಣೆ ಇರಲಿ. ನಮಸ್ತೆ! (ಹೋಗುವನು)

ನರೇಂದ್ರ— ಇದಕ್ಕೆ ವಿಶ್ವವೇ ಬಾಯ್ತೆರೆದು ಕುಳಿತಿದೆ, ಇವನ ಪಾಡೇನು? (ನಗುತ್ತ ಹೋಗುವನು)

## ಪ್ರವೇಶ ೧೨. ರೇಣುಕೆಯ ಗುಡಿಸಲು



ರೇಣುಕಾ— ಮಗೂ ಮಗೂ,

ಅಮರಕಾಂತ— ಅಮ್ಮಾ, ನಾನೊಂದು ಮಾತು ಕೇಳಲೇ?

ರೇಣುಕಾ ಏನದು ಮಗು.

ಅಮರಕಾಂತ— ಅಮ್ಮಾ, ಅಪ್ಪನು ಎಲ್ಲಿಗೆ ಹೋಗಿರುವನು! ಮನೆಗೇಕೆ ಬರುವದಿಲ್ಲ? ಮಗನ ನೆನಪು ಅವನಿಗಿಲ್ಲವೇ? ನಿನ್ನಲ್ಲಿ ಅವನಿಗೆ ಸಿಟ್ಟೆ, ಹೇಳಮ್ಮಾ!

ರೇಣುಕಾ— ತಂದೆ ಯಾರೆಂದು ಹೇಳಲಿ! ತಾಯಿಯೆಲ್ಲಿರುವಳೆಂದು ತೋರಿಸಲಿ! ಇವನಾರ ಮಗನೋ ನಾನರಿಯೆ! ಮಂಕಿಯಾದೆ ಉತ್ತರ ಕೊಡಲು.

ಅಮರಕಾಂತ— ಏಕೆ ಅಮ್ಮಾ, ಸುಮ್ಮನಾದಿ? ಹೇಳಬಾರದೇ ಅಳುವಿಯೇಕೆ? ಅಪ್ಪನು ನಿನ್ನನ್ನು ಹೊಡೆದು ಮನೆಬಿಟ್ಟು ಹೋಗಿರುವನೇ? ಎಂಥ ಕಟುಕನಮ್ಮಾ ನಮ್ಮ ತಂದೆ. ನಿನ್ನನ್ನೂ, ನನ್ನನ್ನೂ ಬಿಟ್ಟು ಹೋದನೆಲ್ಲಿಗೆ ಹೇಳಮ್ಮಾ!

**ರೇಣುಕಾ—** ಅಯ್ಯೋ ಕರುಳನೇ ಕೊರೆಯುತಿದೆ, ಮಗುವಿನ ಒಂದೊಂದು ಶಬ್ದಗಳು ಅವದನ್ನು ಅರಿಯದ ಕಂದ ಮಗೂ ಮಗೂ, (ಅಳುವಳು ತೆಕ್ಕೆ ಬಡಿದು)

**ಅಮರ—** ಹೇಳಲಾರದೆ ಅಳುತಿರುವಿ, ಅಳಬೇಡಾ ಯಾವದನ್ನು ಕೇಳುವದಿಲ್ಲಾ, ನಿನ್ನಾಣೆಯಾಗಿಯೂ ಕೇಳುವದಿಲ್ಲಾ, ಸುಮ್ಮನಾಗು ಹಡೆದವ್ಮಾ.

**ರೇಣುಕಾ—** ಹಡೆದವ್ಮಾ, ಆವಳಿರುವಳು ಈ ರತ್ನವನ್ನು ಹಡೆದವ್ಮಾ, ನಾನು ಹರಿಜನಳು ಕಾಡಬೇಡ ಈ ಸುಪುತ್ರನನ್ನು ಬಿಟ್ಟು ಹೋದ ಆ ತಾಯಿಯಂತಹಾ ನಿರ್ಭಾಗ್ಯಳು. (ನಿರ್ಮಲಾ ಹಿಂದೆ ನಿಂತು ಅಳುವಳು) ಮಗು ಹೊತ್ತಾಗಿದೆ ಮಲಗು (ಮಲಗುವನು) ರೇಣುಕಾ ಮಲಗುವಳು. ಭೀಮಾ ಕೊಡಲಿ ತೆಗೆದುಕೊಂಡು ಬರುವನು.

**ಭೀಮಾ—**ಮಕ್ಕಾಂಡಾರಾ, ಅವನ ಮಗ್ಗಲದಾಗ ಒಬ್ಬಾಕಿ ಅದಾಳು, ಏನಪ್ಪಾ, ಈ ಹುಡುಗನ್ನ ಕೊಂದ್ರ ಈಕಿ ನನಗ ಹೌದಲ್ಲೋ, ನನಗ ಮತ್ಯಾರ್ಗೆ, ತಡ ಯಾಕಲೇ ಭೀಮಾ ತೋಳೇರ್ಸು, ತಗಾ ಕೊಡ್ಲಿ, ಹಾರಸರುಂಡಾ. (ಹೊಡೆಯಲು ಹೋಗುವನು, ನಿರ್ಮಲಾ ಹಿಂದಿನಿಂದ ಬಂದು ಒದೆಯುವಳು. ಬಿದ್ದು ನೆವೇಡಿ ಗಾಬರಿಯಾಗುವನು ಅಂಕು ಬೀಳುವದು.)

## ಪ್ರಥಮಾಂಕ ಮುಗಿದುದು

## ದ್ವಿತಿಯಾಂಕ

### ಪ್ರವೇಶ ೧೩. ರಸಾ.

**ಚಿಂತಾಮಣಿ—** ಅಂದು ಕಂಡ ಅವಳ ರೂಪವು ಇನ್ನು ನನ್ನ ಮನವನ್ನು ಕೊರೆಯುತಿದೆ, ಹೇಗೆ ಮಾತಾಡಿಸುವದು ಹಾ ಮನೆಯಿಂದ ಇತ್ತಲೇ ಬರುತ್ತಿದ್ದಾಳೆ ಮಾತಾಡಿಸುವಾ (ಕನಕಿ ಹೋಗುವಾಗ) ಅಹಾಹಾ ಏನು ಸುಂದರಿ ಈ ನಾರಿ, ರತ್ನ ತಿಪ್ಪಿಯಲ್ಲಿ ಬಿದ್ದರೆ, ಕಣ್ಣಿಗೆ ಚಕ್‌ಯಂದು ಮನಕ್ಕೆ ಧಕ್ ಆಯಿತು, ನೀವು ನಮ್ಮ ಕಲ್ಲಪ್ಪನಾ.

**ಕನಕಿ—** ಹೇಣ್ತಿ ಕನಕವ್ವಾ, ನಮ್ಮ ಮದವಿಗೆ ಬಂದವರು ತಿರಿಗಿ ನಮ್ಮ ಮನಿ ಕಡೆ ಬರಲೇಯಿಲ್ಲಾ, ಏನ ಕೆಲಸಿತ್ತು.

**ಚಿಂತಾಮಣಿ—** ಏನೂ ಇಲ್ಲಾ, ಆವನೊಡನೆ ಮಾತಾಡ ಬೇಕಾಗಿತ್ತು !

**ಕನಕಿ—** ಅದರ ಜೊತೀಗೆ ಏನು ಮಾತಾಡತೀರಿ, ಹುಚ್ಚನನ ಬಟ್ಟ್ಯಾ. ಒಂದು ಐತಂತಾನ, ಒಂದು ಇಲ್ಲ ಅಂತಾನ ಹರಕ ಸೀರಿ ರೊಟ್ಟಿ ಚಟ್ನಿಗೆ ತಾಳಿ ಕಟ್ಟಿಕೊಂಡಂಗಾತು ನನ್ನ ಹಣೆಬರಹ. ನಮ್ಮವ್ವಾ ಇವನಿಗೆ ಸುಮ್ನ ಗಂಟು ಹಾಕಿದ್ದು.

**ಚಿಂತಾಮಣಿ—** ಯಂತ್ರ, ಮಂತ್ರ, ತಂತ್ರ ಮಾನವೀಸಾಹಸಗಳ ಕಾಲದಲ್ಲಿ ಬಿಚ್ಚಲಾರದ ಬ್ರಹ್ಮನಗಂಟು ಬಿಚ್ಚಿಬೀಳುತ್ತಿರುವಾಗ ಈ ಮದುವೆಯ ಗಂಟನ್ನು ಈಗಿಂದೀಗಲೇ ಬಿಚ್ಚಿಒಗೆಯ ಬಹುದು ನಿನಗೆ ಬೇಡಾದರೆ

**ಕನಕಿ—** ಏನ ಮಾಡಬೇಕ್ರಿ ಬಡವರ ಬಾಳೇವು, ಕೈಹಿಡಿದ ಕಾಪಾಡವರು ಬೇಕಲ್ರಿ

**ಚಿಂತಾಮಣಿ—** (ಸ್ವ) ಹಕ್ಕಿಯು ಬಲೆಯಲ್ಲಿ ಬಿದ್ದಿತು ಸುಮ್ಮನಿದ್ದು ಪ್ರಯೋಜನವಿಲ್ಲಾ (ಪ್ರ) ಅವನೇನು ಕಾಪಾಡುವನು ಆ ನರೇಂದ್ರನ ಕೈಕೆ

ಳಗೆ ಅಡ್ಡಾಡಿ ಅಡ್ಡಾಡಿ ಸಾಯಬೇಕಲ್ಲದೆ ಮನಿ ಕಾಣುವಂತಿಲ್ಲ ನಾನು ಬಹು ಹೇಳಿದೆ ಅವನಿಗೆ ಈಗ್ಗೆ ತಿಳಯುವದಿಲ್ಲ ಯಾವದಾದರೂ ಕೇಸಿನಲ್ಲಿ ಪೋಲೀಸರ ಕೈಗೆ ಸಿಕ್ಕುಬಿದ್ದರೇ ನಿನ್ನ ಬಾಳಿಗೆ ನೀರು ಬಿಟ್ಟಂತೆ, ಪಾಪ ಸುಮ್ಮನೇ ನಿನ್ನನ್ನು ಗೋಳಾಡಿಸುತ್ತಿದ್ದಾನೆ. (ಉಸುರ್ಗರೆಯುವನು)

**ಕನಕಿ**— ನೀನು ಅವನು ಒಂದ ಜಾಗಾದಾಗ ಇರತೀರಿ

**ಚಿಂತಾಮಣಿ**— ಹೌದು, ಒಂದೇ ಮನೆಯಲ್ಲಿ ನಾನು ಕುಣಿಯುವದನ್ನು ಕಲಿಸುತ್ತೇನೆ.

**ಕನಕಿ**—ನಿಮ್ಮ ಕಾಲು ಬೀಳತೀನಿ ಹೆಂಗರಮಾಡಿ ಅವನ್ನ ಒಂದೀಟು ಬಾಳೇಕ ಹಚ್ರಿ (ಕಾಲು ಬೀಳುವಳು ಮೇಲೆತ್ತಿ)

**ಚಿಂತಾಮಣಿ**— ಏಳು ಏಳು, (ಸ್ವಗತ) ಇವಳ ಸ್ಪರ್ಶದಿಂದ ಮೈರೊಮಾಂಚಿತವಾದಂತಾಯಿತು. ಆ ಕನಕಿ, ಹೀ ಕನಕಿ ಒಂದು ಮಾತು ಕೇಳಲೆ.

**ಕನಕಿ**— ಏನ್ರಿದು.

**ಚಿಂತಾಮಣಿ**— ನೀನು ನನ್ನವಳಾಗಿಬೇಕು, ವಸ್ತ್ರವಡವಿ ನೀನೇನು ಬೇಡಿದ್ದೆಲ್ಲಾ ಹೂ.

**ಕನಕಿ**— ಇದು ಕಟ್ಟಕರೇ ಮಾತಾ,

**ಚಿಂತಾಮಣಿ**— ನನ್ನಾಣೆ, ನಮ್ಮಪ್ಪನಾಣೆ, ನಿನ್ನ ಕೊರಳಾಣೆ.

**ಕನಕಿ**— ಐ, ಐ ನನ ಬಾಳಿನ ಚಂದ್ರಾಮ್ಮ.

**ಚಿಂತಾಮಣಿ**— ಆಹಹ! ನನ್ನ ಭಾಗ್ಯದ ಬಾಳಿನ ಬೆಳ್ಳಿ ಚಿಕ್ಕೆ!

**ಪದ ಡೈಲಾಗ ರಾಗ : ಮಿಶ್ರಪಹಡಿ ತಾಳ : ಕವಾಲಿ**

**ಕನಕಿ**— ಹೊಸ ಸಂಸಾರವ ಸಾಗಿಸುವಾ ।
**ಚಿಂತಾಮಣಿ**— ಮನದಾಶೆಯ ಪೂರಿಸುವಾ !
**ಕನಕಿ**— ಮನಚಂದಿರನೆ ಗುಣಸುಂದರನೆ ಬಾರೆನ್ನ ಬಾಚೆನ್ನ.
**ಚಿಂತಾಮಣಿ**—ಮನಮೋಹಿನಿಯೇ ಮಮಭಾಮಿನಿಯೆ ಬಾರೆನ್ನ ಬಾರನ್ನೆ
**ಕನಕಿ**— ಕೈ ಬಿಡದೆನ್ನ ಕಾಪಾಡು ದೊರಿಯೆ ।
**ಚಿಂತಾಮಣಿ**— ನೀ ಕೈಬಿಟ್ಟಿಟರು ನಾ ಕೈ ಬಿಡೆನೆ ॥
**ಕನಕಿ** — ಬೇಡಿದ ಒಡವೆಯ ನೀ ಕೊಡಿಸುವಿಯಾ ।
**ಚಿಂತಾಮಣಿ** — ಕೊಡಿಸುವೆ ನಡಿಸುವೆಯಲ್ಲ ಮಾತನು ।

ಕನಕಿ— ಕಟ್ಟಿದ ತಾಳಿಯು ಕೈಬಿಟ್ಟು ನೀ ಕೈಕೊಟ್ಟರೆ ನಾ ಕೆಟ್ಟೆ ।
ಚಿಂತಾಮಣಿ— ಹುಟ್ಟುವ ಮಕ್ಕಳ ಆಣೆಟ್ಟೆ ನೀಸತ್ತರೆ ಅಲ್ಲಿಗೆ ಕೈಬಿಟ್ಟೆ ।

ನಿಂಗಿ— (ಒಳಗಿನಿಂದ) ಕನಕಿ ಏ ಕನಕಿ.

ಚಿಂತಾಮಣಿ— ಅಯಯ್ಯೊ ಯಾರೊ ಬಂದಂತಾಯಿತು.

ಕನಕಿ— ಏ ಬಾಯಿಲ್ಲೆ, ಮತ್ತ ಮರಿಬ್ಯಾಡ್ರಿ.

ನಿಂಗಿ— (ಒಳಗಿನಿಂದ) ಕನಕಿ, ಏ ಕನಕಿ ಏನಮಾಡ್ತಿ

ಚಿಂತಾಮಣಿ— ಇದಾವ ರಾಕ್ಷಸಿ ಎಂಥಾ ಹೊತ್ತಿನಲ್ಲಿ ಬಂದಿತಲ್ಲಾ

ಕನಕಿ— ಆಕಿ ನನ್ನ ಗೆಳತಿ ನಿಂಗಿ

ಚಿಂತಾಮಣಿ— ಅಯ್ಯ ನಿಂಗಿ ನಾ ಮಂಗನಾಗಿದ್ದೆ.

ಕನಕಿ— ಮತ್ತ ಯಾವಾಗ ಬರ್ತೀರಿ

ಚಿಂತಾಮಣಿ— ನಾಳೆ ಸಂಜೆಗೆ ತಪ್ಪದೆ ಸಿದ್ಧ, ಇಟ್ಟುಕೊ ಉಂಗರ ಯಾರಲ್ಲು ಮಾರಬೇಡ ಇದರ ಸುದ್ದೀ. ಆದಕ್ಕಾಗಿ ಈ ಮುದ್ದು (ಹೋಗುವನು ಕೈ ಬೀಸುತ್ತ ಸೊನ್ನೆ ಮಾಡುವಳು. ಕಲ್ಯಾ ಹಿಂದೆ ನಿಂತು ನೋಡಿ)

ಕಲ್ಲಪ್ಪ— ಕನಕಿ, ಎ ಕನಕಿ ಯಾಕ ಚೌರಾಬೀಸಾಕ ಹತ್ತಿಯಲ್ಲಾ ಹಿತ್ತಲದಾಗ ಹೆಗ್ಣ ಗುದ್ದು ಮಾಡೇತೇನು.

ಕನಕಿ— ಸಾಕು ಬಾಯಿಮುಚ್ಚು ನಿನಂಗ ಹುಚ್ಚು ಬಾಳೇ ಮಾಡಾಕೆಲ್ಲಾ ಏನರ ಬೊಗಳಬ್ಯಾಡ ಮನ್ಯಾಗ ಹೆಂಗಸರಿದ್ದ ಮ್ಯಾಲೆ ಪೈಮ್ಯಾಲೆ ಓಟು ಎಚ್ಚರಕಿ ಇರಬೇಕು.

ಕಲ್ಲಪ್ಪ— ನಮ್ಮ ಎಚ್ಚರಕೆ ತಪ್ಪಿದಲ್ಲೇ ನಿನಗ ಚಿನ್ನಾಟ ಆಗೇತಿ ಚಿನ್ನಾಟ.

ಕನಕಿ— ಏನ ಹೊಲಸ ಮಾತಾಡ್ತಿಯಾ, ನಾ ಅಂತಾ ಹುಡಿಗೆಲ್ಲ ಯಾರ ಕಡಿಂದ ಅಲ್ಲ ಅನಿಸಿಕೊಳ್ಳಾಕೆಲ್ಲ.

ಕಲ್ಲಪ್ಪ— ಶೀಲ ಸಂಪನ್ನೆಯಾಗಿ ಸದಾಶಿವನ ಭಕ್ತಳಾಗಿ ಸಕಲ ನಾರೀ ಜನಕೆ ದಾರಿ ತೋರುವ ಇವಳಲ್ಲವೇ, ಸುಶೀಲೆ ವನಪಿನ ಹರಿಜನ ಬಾಲೆ.

ಕನಕಿ— ಇಲ್ಲಿ ನೋಡು ಬಾಯಿಗೆ ಹೆಂಗ ಬರತೈತಿ, ಹಂಗ ಅನ ಬ್ಯಾಡ ನಮ್ಮವ್ವಾ ಏನ ಹೇಳಿದ್ನು ನೀ ಕರಕೊಂಡು ಬರೋಮುಂದ ಆಗ ಹೂ ಅಂದು ಈಗ ಹೆಂಗಬೇಕು ಹಂಗಮಾತಾಡ್ತಿ, ಎಂತಾ ಗಂಡಗ ಕೊಟ್ಟಿ ನಮ್ಮವ್ವಾ.

ಕಲ್ಲಪ್ಪ— ಯಂತಾ ಹೇಣ್ತಿನ ನನಗೆ ಕೊಟ್ಟಿ ನಮ್ಮವ್ವಾ, ನೀರ ಗಣ್ಣಿನ ನಾರಿ ಊರ ಹಾಳ ಮಾಡಿದ್ಲಂತೆ, ಹೀಗೆಲ್ಲಾ ಮಾಡಾಕ ಹತ್ತೀದಿ ಅಂದ್ರು ಕನಕಿ ಒಂದು ಗುದ್ಗೆ ತಿಣಕಿ.

ಕನಕಿ— ಒಬ್ಬಕಿನ ಮಾಡಿ ಹಂಗ ಹಲ್ಲು ಕಡಿಬ್ಯಾಡ, ನಾನೀಗ ನಮ್ಮವ್ವನ ಹಂತ್ಯಾಕ ಹೋಗಿ ಬಿಡತೀನಿ.

ಕಲ್ಲಪ್ಪ— ತಡಾ ಮಾಡಿದೀ ಅಂದ್ರ ನಿಮ್ಮ ದೇವರಾಣೆ ಆಗೇತಿ ನಡಿ ಗಂಟು ತಗಂಡು.

ಕನಕಿ— ನಾ ಮದಲ ಒಲ್ಲೆಂದಿನೇ ಯವ್ವಾ ಇವನ ಮದಿವ್ಯಾಗಾಕ ಕೊಟ್ಲೆಯವ್ವಾ ಇವನ ಮನಿಗೆ ಮಣ್ಣಾಗಿಡಾಕ. (ಲಟಗಿ ಮುರಿಯುವಳು)

ಕಲ್ಲಪ್ಪ— ತೆರವಿನ ಹಣ ಮುಂಗಡ ಹೊಡಕೊಂಡಿದ್ದಕ ಈ ಗಯ್ಯಾಳಿನ ನನಗೆ ಗಂಟ ಹಾಕಿದ್ಲಯವ್ವಾ ನಿಮ್ಮವ್ವಾ.

ಕನಕಿ— ಹೊಟ್ಟೆಗೆ ಬಟ್ಟೆಗೆ ಕೊಟ್ಟು ಹೆಂಡತಿ ಆಳಲಾರದ ಗಂಡ್ಸು ರಂಡಿ ಹೆಂಗಸಿಗಿಂತ ಕಡಿ.

ಕಲ್ಲಪ್ಪ— ಲೇ ಭಂಡಿ, ಮಾತಾಡಿದ್ರ ನಿನ್ನ ರುಂಡನ ಚೆಂಡೀ ಆಡಿ ಬಿಟ್ಟೇನು !

ಕನಕಿ— ಅವ್ವಾ ! ಏಟ ಬಿಂಕಾ ತೋರಸ್ತೈತಿದು ಒಣ ಸುಂಟಿ ಮಾರೀದು, ಹೊಕ್ಕೀನಿ ಹೋಗನೀ ಏನ ಮಾಡಿ ನೀ ಏನನೋಡಿ.

ಕಲ್ಲಪ್ಪ— ನಿನಗೂ ನಿಮ್ಮವ್ವಗೂ ಮಾಡೂದ ಮಾಡೇ ಕರಕೊಂಡು ಬರತೀನಿ ನಾ ಬಿಡ ಮಗನ ಅಲ್ಲ.

ಕನಕಿ— ನನ್ನ ಬಾಳೇವು ಹೆಂಗಾತಯವ್ವಾ (ಅಳುತ್ತ ಹೋಗುವಳು)

ಕಲ್ಲಪ್ಪ— ಹೆಣ್ಣಿಗೆ ಹೆದರಾವ್ನ ನಾನು, ಗಂಡು ದುಡಿಯಾಕ ಗಟ್ಟಿದ್ದವ್ಯಾಲ ಇಂತಾ ಹೆಣ್ಣಾ ಏಟ ಸಿಕ್ಯಾವು ಏಟು ಬಿಟ್ಯಾವು. ಹೋಗು ಹೋಗು ಇನ್ನ ಯಡ್ಡ ದಿನದಾಗಲೇ ತೋರಸ್ತೀನಿ ಈ ಕಲ್ಲ್ಯಾನ (ಹೋಗುವನು)

## ಪ್ರವೇಶ ೧೪.

( ಅಶೋಕನ ಕೋಣಿ ಪ್ಲಾಟು ಸೀನ )

**ಅಶೋಕ**— ನನ್ನ ಕಕ್ಕನ ಮನೋಭಾವನೆಯು ಬದಲಿಸದಾಯ್ತು ಮಾಯೆಯನ್ನು ಗೆದ್ದ ಮಾನವರು ವಿರಳಾ. ಆದರ ತೆಕ್ಕೆಯಲಿ ಸಿಕ್ಕ ಆತನ ಹುಚ್ಚಾಟವು ಮಿತಿಮೀರಿದೆ, ನಮ್ಮ ಕಕ್ಕನ ವಿವಾಹಕ್ಕೆ ನರೇಂದ್ರನೇ ಮೂಲ ಕಾರಣ. ಈ ವಂಚನೆ ಮಾಡಬೇಕೆ? ಮಿತ್ರತ್ವದಲ್ಲಿ ಜನಸೇವಕನಾಗಿ ತಪ್ಪು ದಾರಿ ಹಿಡಿಯದ ನರೇಂದ್ರನು ಯಾವ ಫಲಕ್ಕಾಗಿ ನನ್ನ ಕಕ್ಕನ ಮನ ಕೆಡಿ ಸಲು ಪ್ರಯತ್ನಿಸಿರಬೇಕು. ಇನ್ನೊಮ್ಮೆ ಕಕ್ಕನನ್ನು ಕಂಡು ತಿಳಿಹೇಳುವೆ.

**ಕಾಲಗತ**— (ಒಳಗಿನಿಂದ ಹೇಳಬೇಕು) ನಿರ್ಮಲೆ ಗರ್ಭಸಂಜಾತ ನಾದ ಅಮರಕಾಂತನು ೨೦ ವರ್ಷದವನಾಗಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪಾಸಾಗಿ ಗುರುವಿನ ಆಶೀರ್ವಾದ ಪಡೆಯಲು ಬರುತ್ತಿದ್ದಾನೆ. ಅಮರ ಕಾಂತ ನಿರ್ಮಲೆಯ ಮಗ ಅಮರಕಾಂತ (ಪತ್ರಿಕೆ ಓದಿ) ತಬ್ಬಲೆಯ ಮಗ ನನ್ನೂ ಪಾಲನಗೈದದ್ದು ಸಾರ್ಥಕವಾಯಿತು. ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪಾಸಾದನೇ ಅಮರಕಾಂತಾ (ಬರುವನು)

**ಅಮರಕಾಂತ**— ಗುರುಜೀ ನಮಸ್ತೆ.

**ಅಶೋಕ**— ಬಾ ಮಗು ನಿನ್ನ ಬುದ್ಧಿ ಸಾಹಸಕ್ಕೆ ನನಗೆ ಸಂತೋಷ ವಾಗಿದೆ, ವರುಷ ವರುಷವು ತಪ್ಪದೇ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುತ್ತಾ ಬಂದೆ. ನೀನು ಪರಿಕ್ಷೆಯಲ್ಲಿ ಪಾಸಾದದ್ದು ಈ ದಿನ ಪತ್ರಿಕೆಯಲ್ಲಿ ನೋಡಿ ಬಹಳ ಆನಂದವಾಯ್ತು. ಜಗದೀಶನ ಅನುಗ್ರಹವು ನಿನಗೆ ಸಂಪೂರ್ಣ ವಾಗಿದೆ.

**ಅಮರಕಾಂತ**— ಗುರೂಜಿ, ಅನಾಥಮಕ್ಕಳ ವಿದ್ಯಾಭ್ಯಾಸಕ್ಕಾಗಿ ಸಾಹಸಪಡುತ್ತಿರುವ ನಿಮ್ಮ ಕೃಪೆಯೇ, ನನ್ನ ಉನ್ನತಿಗೆ ಕಾರಣವಾಗಿದೆ. ಗುರೂಜಿ, ನನ್ನದೊಂದು ಬೇಡಿಕೆ.

**ಅಶೋಕ**— ಹೇಳು ಅಮರಕಾಂತಾ. (ಪತ್ರ ಕೊಡುವನು. ಓದಿ) ಏನು ಮುಂಬೈ ಸರಕಾರದ ಗೃಹಶಾಖೆಯವರು ನಿನ್ನನ್ನು ಪೋಲೀಸ ಸಬ್ ಇನಸ್ಪೆಕ್ಟರ ಟ್ರೇನಿಂಗಿಗೆ ಆರಿಸಿರುವರೇ ?

**ಅಮರಕಾಂತ**— ಇದಕ್ಕೆ ತಮ್ಮ ಆಶೀರ್ವಾದವನ್ನು ಪಡೆಯಲು ಬಂದಿರುವೆ.

**ಅಶೋಕ**— ನಿನ್ನಾಶೆಯನ್ನು ಭಂಗ ಮಾಡಲಾರೆ, ಯಾವ ಅಧಿಕಾರದ ಪದವಿಯನ್ನು ಹೊಂದಿದರೂ, ಮನವು ಮಾತ್ರ ನಿರ್ಮಲವಾಗಿರಲಿ ! ದೇಶಸೇವೆಯ ಹಿತಸಾಧನೆಯು ನಿನ್ನಂತರಂಗದಲ್ಲಿ ಸದಾ ನೆಲೆಗೊಳ್ಳಲಿ ! ಹೆಸರಿಗೆ ತಕ್ಕಂತೆ ಅಮರಕಾಂತನಾಗಿ ಬಾಳು. ಜನಸೇವೆಯ ಸೇವಕನಾಗಿ, ದೇಶಕ್ಕೆ ಹಿತಕಾರಿಯಾಗಿರುವದೇ ಅಧಿಕಾರಿಯ ಕರ್ತವ್ಯ !

**ಅಮರಕಾಂತ**— ಆ ಸಾಧನೆಯ ಧ್ಯೇಯವೇ ನನ್ನ ಮನದಲ್ಲಿ ಮೂಡಿಕೊಂಡಿದೆ. ವರ್ಣಧರ್ಮದ ಭೇದವನ್ನು ತಾರದೇ ತಬ್ಬಲಿಯಾದ ನನ್ನನ್ನು ಪ್ರಬುದ್ಧನನ್ನಾಗಿ ಮಾಡಿದ ನಿಮ್ಮ ಕರುಣೆಯೇ ನನ್ನ ಶ್ರೇಯಸ್ಸಿಗೆ ಮೂಲ.

**ಅಶೋಕ**—ಧರ್ಮಗ್ರಂಥಗಳ, ಕಟ್ಟುಕಥೆಗಳ, ಆಧಾರವಿಲ್ಲದ ಭೇದಗಳ, ಕಲ್ಪನೆಯ ಹುಚ್ಚಾಟಕ್ಕಿಂಬಿಲ್ಲ, ಈ ಜಾಗೃತ ಯುಗದಲ್ಲಿ ! ಅಮರಕಾಂತಾ, ಯಾವ ಕಾಲದ ಶಾಸ್ತ್ರ ಏನು ಹೇಳಿದರೇನು ? ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ? ಹಿಂದಿನಾಋಷಿಗಳೂ ಮಾನವರೇ ನಮ್ಮಂತೆ ! ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ ! ಕಾಲಕ್ಕೆ ತಕ್ಕಂತೆ, ದೇಶಕ್ಕೆ ನಮ್ಮ ಹೃದಯವೇ ನಮಗೆ ಶ್ರೀ ಧರ್ಮಸೂತ್ರ. ಮಗೂ, ಸತ್ಯವೇ ಜನನಿ, ಜ್ಞಾನವೇ ಜನಕಾ, ಶಾಂತಿಯೇ ಪತ್ನಿ , ಧರ್ಮವೇ ಸೋದರಾ, ದಯವೇ ಸಖಾ, ಕ್ಷಮೆಯೇ ಪುತ್ರ ಎಂಬ ವಿವೇಕ ಮನೋವೃತದಂತೆ ವಜ್ರಕಾಯನಾಗಿ, ತಾಯ್ನಾಡಿಗಾದರ್ಶನಾಗಿ ಬಾಳು.

**ಅಮರಕಾಂತ**— ಆಗಲಿ ಗುರೂಜಿ, ತಮ್ಮ ಆಶೀರ್ವಾದವೇ ನನಗೆ ವಜ್ರಕವಚ !

**ಅಶೋಕ**— ನಿನ್ನ ಪಾಲನ ತಾಯಿಯನು ಕಂಡು ಆ ಮೇಲೆ ಹೊರಡು ವಿಯಂತೆ (ಹೋಗುವನು) ನಿಜವಾಗಿ ಸದ್ಬುದ್ಧಿ ಜೀವಿ ಈ ಬಾಲರವಿ.

**ಪದ** ರಾಗ : ತಿಲಂಗ ತಾಳ : ತ್ರಿತಾಲ

ಸುಜನಜನದಾ ಸದುಭಾವದ ನಿರುತತಾ ಸಮತಾ ||ಪ||
ಉದಿಸಿ ಮನದಿ ಭಾರತಾ |
ಅಳಿಯುತೇ ಮಲಿನ ಬೇದಭಾವ ||

( ಪದ ಮುಗಿದ ಕೂಡಲೆ ತೆರೆ ಮೇಲೇಳುವದು. ಶಾಡೊ ಸೀನಿನಲ್ಲಿ ಅಮರಕಾಂತನು ಅಧಿಕಾರ ಸ್ವೀಕರಿಸುವ ದೃಶ್ಯ ತೋರಿಸಬೇಕು.)

**ಹಿನ್ನೆಲೆ—** ಅಮರಕಾಂತನು ನಾಸಿಕ್‌ದಲ್ಲಿ ಎರಡು ವರ್ಷ ಸಬ್ಬಿನ ಸ್ಪೆಕ್ಟರಕೋರ್ಸು ಮುಗಿಸಿ ಪರೀಕ್ಷೆಯಲ್ಲಿ ಪಾಸಾಗಿ ಸಬ್‌ಇನಸ್ಪೆಕ್ಟರ್ ಅಧಿಕಾರ ಸ್ವೀಕಾರ ಮಾಡಿದ್ದಾನೆ ಅಮರಕಾಂತ.

## ಪ್ರವೇಶ ೧೫.



(ಪೋಲೀಸ ಸ್ಟೇಶನ್ ಸೀನು. ಅಥವಾ ಪ್ರಾಪು ಖುರ್ಚಿ ಟೇಬಲ್ಲು ಇಡಬೇಕು ಸಬ್‌ಇನಸ್ಪೆಕ್ಟರ ಡ್ರೆಸ್ಸಿನ ಮೇಲೆ ಅಮರಕಾಂತ ಬಂದು ಕುಳಿತುಕೊಳ್ಳುವನು)

**ಪೋಲೀಸ—** ರಾವಸಾಹೇಬ, ಇವನು ಕಳವಿನಿಂದ ಬಟ್ಟಿಶೆರೆ ಮಾರಾಟ ಮಾಡುತ್ತಿದ್ದು ಇವನ ಹೆಂಡತಿಯು ಬೇಡೆಂದು ಪರಿಪರಿಯಿಂದ ಹೇಳಲು ಮನಸೋಕ್ತಾ ಕುಡಿದು ಕೊಡಲಿಯಿಂದ ಹೆಂಡತಿಯ ತಲೆವಡೆದು ಗಾಯ ಮಾಡಿದ್ದಾನೆ.

**ಅಮರಕಾಂತ—** ನಿನ್ನ ಹೆಸರು ?

**ಮರಿಯು—** ಮರಿಯ

**ಅಮರಕಾಂತ—** ನೀನು ಮಾಡುವ ಕೆಲಸವೇನು ?

**ಮರಿಯು—** ಕೂಲಿ ಮಾಡ್ತಿನ್ರಿ

**ಅಮರಕಾಂತ—** ಹೀಗಿದ್ದು ಶೆರೆಯ ಮಾರಾಟವನ್ನೇಕೆ ಮಾಡಿ ಜೀವಿಸುವೆ.

ಮರಿಯ— ಎಪ್ಪಾ, ನಾ ಶೆರೆ ಮಾರಾಟಾ ಮಾಡವಲ್ರಿ, ಮಾರಾಟದ ಮಂದಿ ನನ್ನ ಕೈತುಂಬ ರೊಕ್ಕಸುರುವಿ ನನ್ನ ಮನ್ಯಾಗ ಬಾಟ್ಲಿಯಿಟ್ಟು ಒಯ್ದು ಒಯ್ದು ಮಾರಾಟಾ ಮಾಡಿಕೊಂತಿದ್ರು, ತಪ್ಪದ ದಿನ ಐದು ರೂಪಾಯಿ ಕೊಡುತ್ತಿದ್ರು ಈ ಆಶೇಕ ಬಿದ್ದು ನಾನು ಅವರಿಗೆ ಸವಲತ್ತು ಕೊಟ್ಟೆ.

ಅಮರಕಾಂತ— ನಿನ್ನ ಹೆಂಡತಿಯ ತಲೆ ಒಡೆದು ಗಾಯಮಾಡಿದ್ದು ನಿಜವೇ ?

ಮರಿಯ— ಈ ಕೆಟ್ಟ ಕೆಲಸ ಬ್ಯಾಡಂತಾ ನನ್ನ ಹೆಂಡತಿಗೆ ಹೇಳಾಕ ಬಂದ್ಲು, ನಿಸೇದಾಗ ಆಕಿ ತಲಿ ಒಡದದ್ದು ಖರೇರಿ.

ಅಮರಕಾಂತ— ದುಡಿದು ತಿನ್ನಲಾರದೆ ಸೆರೆಯ ಸೇವನೆಯಿಂದ ಆದಕ್ಕೆಬೆಂಬಲ ಕೊಟ್ಟು ನಿಮ್ಮ ಬಾಳನ್ನು ಹಾಳು ಮಾಡಿ ಕೊಳ್ಳುತ್ತಿರುವಿರಿ. ಶೆರೆಯ ದುಷ್ಪರಿಣಾಮದಿಂದ ಆದರ ಅವ್ಯವಹಾರದಿಂದ ಮಣ್ಣುಗೂಡುತ್ತಿದ್ದ ಜನತೆಯನ್ನು ಜಾಗ್ರತಗೊಳಿಸಲು ಸರಕಾರವು ಪಾನನಿರೋಧ ಕಾಯ್ದೆಯನ್ನು ಜಾರಿಯಲ್ಲಿ ತಂದಿದ್ದರೂ ಅದರಿಂದ ಎಚ್ಚರಗೊಳ್ಳದ ನೀವೆಂಥಾ ಹೊಲೆಯರು.

ಮರಿಯ— ಯಪ್ಪಾ ನಿನ್ನ ಕಾಲ ಕಸ ಆಗಿ ಬದಕತೀನಿ, ಇದೋ ಇದೊಮ್ಮೆ ಕ್ಷಮಾ ಮಾಡು ತಂದೆ.

ಅಮರಕಾಂತ— ಬದ್ಮಾಷ್ ! (ಒದ್ದು) ಈಗ ಎಚ್ಚರಿಕೆ ಬಂದಿತೇ ನಿನಗೆ ?

ಮರಿಯ— ವದಿ, ಇನ್ನೂ ವದಿಯಪ್ಪಾ ಬುದ್ಧಿ ಬರ್ಲಿ ಈ ನಾಚಿಗ್ಗೇಡಿ ಜನ್ಮಕ್ಕ.

ಅಮರಕಾಂತ— ತಾಳೀ ಕಟ್ಟಿಕೊಂಡವಳು ನಿನ್ನ ಬಾಳಿನ ಎಚ್ಚರಿಕೆಯನ್ನು ಹೇಳಲು ಬಂದಾಗ್ಗೆ ನಿರ್ದಯನಾಗಿ ಕೊಡಲಿಯಿಂದ ಅವಳ ತಲೆ ಒಡೆಯುವಾಗ್ಗೆ ಶರಮನೆಯಲಿ ಕೊಳೆಯಬೇಕೆಂಬದು ಹೊಳೆಯಲಿಲ್ಲಾ ಶೆರೆಯ ನಿಶೆಯಲ್ಲಿ.

ಮರಿಯ— ಯಪ್ಪಾ ಬಡವನ್ರಿ ತಂದೆ.

**ಅಮರಕಾಂತ**— ಬಡವನಾಗಿದ್ದರಿಂದಲೇ ಸಿರಿವಂತನಾಗಲು ಬಯಸಿದ್ದಿಯೇನು ? ಈ ದುಡಿಮೆಯಿಂದ.

**ಮರಿಯು**— ದೇವರ್‍ರು, ಮೂರು ಮಕ್ಕಳದಾವ ಅವರ ಸಾಕ್ಷಿಯಾಗಿ ಹೇಳ್ತೇನಿ. ಇನ್ನೊಂದೂ ಈ ಶೆರೆ ಮುಟ್ಟುದಿಲ್ಲಾ, ಪಾದಕ ಬೀಳತೀನಿ ಕಾಪಾಡು ನಮ್ಮಪ್ಪಾ.

**ಅಮರಕಾಂತ**— ದುಡಿದ ದುಡ್ಡನ್ನು ಶೆರೆಯ ಸೇವನೆಗೆ ಹಾಳು ಮಾಡಿ ಹೆಂಡರ ಮಕ್ಕಳ ಹೊಟ್ಟೆ ಬಟ್ಟೆ ನೋಡದ ಕೆಟ್ಟತನಕ್ಕಾಗಿ ಹೆಂಡಂದಿರು ಕೈ ಬಿಟ್ಟು ಮತ್ತಾವ ಗತಿ ಹೊಂದುವರೋ, ಹೊಟ್ಟೆಯ ಮಕ್ಕಳು ಬಿಕ್ಕಿ ಕೂಳಿನಿಂದ ಕಳವು ಕೊಲೆಗೆ ನಿಲ್ಲುವರು. ಇಷ್ಟೊಂದು ಚಿತ್ರಗಳು ಕಣ್ಮುಂದೆ ಕಾಣುತ್ತಿದ್ದರೂ ಜಾಗ್ರತರಾಗದೆ, ಹೆತ್ತಮ್ಮನ ಒಡಲ ರಕ್ತಕ್ಕೆ ಸಮಾನವಾದ ಶೆರೆಯ ಸೇವನೆಗೆ ಆಶೆ ಪಡುವ ಹೇಸಿ ಶೆರೆಗುಡುಕರ ಜನ್ಮಕ್ಕೆ ಧಿಃಕ್ಕಾರ ವಿರಲಿ, ಇವನನ್ನು ಒಳಗೆ ಹಾಕು.

**ಪೋಲೀಸ**— ರಾವಸಾಹೇಬ (ಪತ್ರಕೊಟ್ಟು ಹೋಗುವನು)

**ಅಮರಕಾಂತ**— (ಓದಿ ಬೆಲ್ ಬಾರಿಸಿ) ಜಮಾದಾರ !

**ಜಮಾದಾರ**— ಸಾರಃ (ಶೆಲೇಟ್ ಹೊಡೆದು ನಿಲ್ಲುವನು)

**ಅಮರಕಾಂತ**— ಧರ್ಮಸಾಗರದಲ್ಲಿ ಕೊಲೆಯಾಗಿದೆಯಃಂತೆ ಅದರ ತಪಾಸಣೆಗೆ ಹೋಗಬೇಕಾಗಿದೆ. ಬಂದೋಬಸ್ತಿಗೆ ಪೋಲೀಸರನ್ನು ಕರೆದು ಕೊಂಡು ೩ ಘಂಟೆಗೆ ಹಾಜರ ಇರಬೇಕು.

**ಜಮಾದಾರ**— ಎಸ್ ಸಾರ (ಶೆಲೇಟ ಹೊಡೆದು ಹೋಗುವನು)

**ಪೋಲೀಸ**— ರಾವಸಾಹೇಬ (ಪತ್ರಕೊಟ್ಟು ಶೆಲೇಟ ಹೊಡೆದು ಹೋಗುವನು)

**ಅಮರಕಾಂತ**— (ಓದಿ) ಗುರೂಜಿ ನೀನೇ ದೀನಬಂಧು ಕರುಣಾ ಮೂರ್ತಿ, ನಿನ್ನ ಕರುಣೆಯಿಂದಲೇ ನನಗೆ ಈ ಪದವಿ ದೊರತಿದೆ, ಮರಿಯು ಲಾರೆ ಜನ್ಮಜನ್ಮಾಂತರದಿ ನಿನ್ನ ನಾಮಸ್ಮರಣೆಯಾ.

## ಪ್ರವೇಶ ೧೬. ರಸ್ತಾ



**ಅಶೋಕ**— (ಪತ್ರ ಓದುತ್ತಾ) ಏನು ಪ್ರಗತಿ ಸಾಧನೆಯ ಸಾಹಸಿ ಇವನು ಅಮರಕಾಂತಾ,ದುಶ್ಚಟಗಳಿಗೆ ಮನವಿಟ್ಟ ತರುಣ ಭಾರತಾ, ನೋಡಿ ಅಮರಕಾಂತನ ಸಾಹಸವನ್ನು !

**ರೇಣುಕಾ**— ನಮಸ್ತೆ ಒಡೆಯಾ !

**ಅಶೋಕ**— ರೇಣುಕಾ ನಿನ್ನ ಪಾಲನೆಯು ಸಾರ್ಥಕವಾಯಿತು. ಬೆಳಗುತಿದೆ ನಿನ್ನ ಪಾಲನೆಯ ಕುವರಾ ಬೆಳಗುತಿರುವನು, ಅಧಿಕಾರಿಯಾಗಿ ಜನಹಿತ ಕಲ್ಯಾಣದಲ್ಲಿ.

**ರೇಣುಕಾ**— ಒಡೆಯಾ, ಈ ಹರಿಜನಳ ಪಾಲನೆಯಿಂದಲ್ಲಾ ದೀನ ಬಂಧುವಾದ ನಿನ್ನ ಕರುಣೆಯ ಆಶೀರ್ವಾದದಿಂದ ಅನಾಥ ಮಗು ಈ ಬೆಳಕನು ಕಂಡಿತು.

**ಅಶೋಕ**— ಹೀನ ಕರ್ಮಕ್ಕೆ ಕೈನೀಡುವವರು ಹೊಲೆಯರು ಬಾಳಿನ ಕಣ್ಣಾಗಿ ಜನನಕ್ಕೆ ತಾಯಿಯಾಗಿ ಸ್ತ್ರೀಯ ಹೀನನಡೆತೆಗೆ ಮಾರಿ ಯಾಗಿ ಕಲಂಕಿತರಾಗಿ ಬಾಳದೆ ಕುಲಕೆಲ್ಲಾ ಗುಣದ ಮೇಲ್ಮೆಯನ್ನು ನಿನ್ನಿಂದ ಕಾಣಲಿ ತಾಯಂದಿರು.

**ರೇಣುಕಾ**—ಬಾಪೂಜಿ ಇನ್ನೆಂದು ಬರುವನು ಅಮರಕಾಂತನಿಲ್ಲಿಗೆ.

**ಅಶೋಕ**— ಇಲ್ಲಿಗೆ ವರ್ಗಾಯಿಸಬೇಕೆಂದು ಮೇಲಧಿಕಾರಿಗಳಿಗೆ ಹೇಳಿಕೊಂಡ ಮೇರೆಗೆ ಅವನ ಕರ್ತವ್ಯ ನಿಷ್ಠೆಯನ್ನು ಕಂಡು ಇಲ್ಲಿಗೆ ವರ್ಗ ಮಾಡಿರುವರಂತೆ.

**ರೇಣುಕಾ**— ಈ ಸುದ್ದಿಯನ್ನು ಕೇಳಿ ಮನಸ್ಸಿಗೆ ಆನಂದವಾಯಿತು ಬಾಪೂಜಿ ಅಮರಕಾಂತನು ಬಂದ ಮೇಲೆ ನನಗೆ ಭೆಟ್ಟಿಮಾಡಿಸುವಿರಾ.

**ಅಶೋಕ**— ಮಗನು ತಾಯಿಯನ್ನು ಕಾಣದಿರುವನೇ, ರೇಣುಕಾ ನೀನು ಆಶ್ರಮಕ್ಕೆ ನಡೆ ನಾನು ಕಕ್ಕನನ್ನು ಕಂಡು ಬರುವೆ. (ಹೋಗುವಳು) ಜೀವನಕ್ಕೆ ಕುಲವಲ್ಲ ಗುಣವೇ ಹಿರಿಮೆ ಎನ್ನುವದನ್ನು ಕಾಣಲಿ ಜಗತ್ತು ಅಮರಕಾಂತ ರೇಣುಕೆಯ ಜೀವನದಿಂದ.

**ಪದ** ರಾಗ : ಬಾಗೇಶ್ರೀ ತಾಳ : ತ್ರಿತಾಲ

ಮಾನ್ಯಗುಣಧರ್ಮದ ತೇಜದಾ। ಧನ್ಯ ಜನಗಣ ಶ್ರೀಯಜಗದಾ॥ಪ॥
ಕುಲಮದ ಧನಮದ ವಿನಾಶ ಮಾನವನಾ ।
ಗೈಯುತಿ ಸತತ ವಿಷಭಾವನಾ ॥ (ಹೋಗುವನು)

( ಸಭೆಯಿಂದ ಶ್ರೀಕಾಂತ, ಕುಸುಮ, ನರೇಂದ್ರ ಕೈಯಲ್ಲಿ ಮಾಲೆ ಹಿಡಿದು ಬರುವರು. )

**ಶ್ರೀಕಾಂತ**— ನರೇಂದ್ರಾ ಸ್ಫೂರ್ತಿಯನ್ನು ಹುಟ್ಟಿಸುವ ಇಂದಿನ ನಿನ್ನ ಭಾಷಣವು ಸಭಿಕರನ್ನು ಜಾಗ್ರತಗೊಳಿಸಿತು ನಿನ್ನ ಭಾಷಣವನ್ನು ನಾನು ಕೇಳಿರಲಿಲ್ಲ ಬಹಳ ಆನಂದವಾಯಿತು.

**ನರೇಂದ್ರ**— ಈ ಆಗಷ್ಟ ೧೫ ನೇ ದಿನವೇ ಸರ್ವ ಭಾರತಿಯರಿಗೆ ಸ್ವಾತಂತ್ರವನ್ನು ತಂದ ಶುಭದಿನ ಸತ್ಯಶಾಂತಿ ಅಹಿಂಸೆಗಳಿಂದ ದೇವಮಾನವತ್ವವನ್ನು ಪಡೆದಿರುವ ಯುಗ ಪುರುಷ ಮಹಾತ್ಮಾ ಗಾಂಧೀಜಿಯವರ ಸತ್ಫಲವೆ. ಸಾಧನದಿಂದ ನಾಡದೇವಿಯ ಮಕ್ಕಳ ಹೃದಯದಲ್ಲಿ ರೂಪಗೊಂಡ ಈ ಸ್ವಾತಂತ್ರವನ್ನು ತಂದಿತು.

**ಕುಸುಮ**— ನಿಜವಿದೆ ನರೇಂದ್ರಾ, ಭಾರತಾಂಬೆಯು ತನ್ನ ಮಕ್ಕಳೊಳು ಅಕ್ಕರದಿ ನಲಿಯುತಿರುವಳು ಈ ಸ್ವಾತಂತ್ರ್ಯದ ಸುದಿನದಿ !

**ಶ್ರೀಕಾಂತ**— ಇವಳ ಭಾಷಣವಂತೂ ಸ್ತ್ರೀ ಕುಲಕ್ಕೆ ಆದರ್ಶವಾಗಿತ್ತು. ಎಷ್ಟಾದರೂ ವಿದ್ಯಾವತಿ, ನಾನು ಹೊಗಳುವದೇಕೆ, ಜನವೇ ಇವಳನ್ನು ಬಾಯ್ತುಂಬ ಬಣ್ಣಿಸಿತು. ನರೇಂದ್ರಾ, ನಿಜವಾಗಿ ಆದರ್ಶ ದೇಶಭಕ್ತನೆಂದರೆ ನೀನೆ !

**ನರೇಂದ್ರ**— ಹಿರಿಯರಾದ ತಮ್ಮ ಆಶೀರ್ವಾದ. ನಡೆಯಿರಿ, ಹೋಗುವಾ. (ಹೋಗುವರು. ನಗುತ್ತ ಅಶೋಕ ಪತ್ರಓದುತ್ತ ಬರುವನು)

## ಪ್ರವೇಶ ೧೭. ಶ್ರೀಕಾಂತನ ಬಂಗ್ಲೆ



( ಶ್ರೀಕಾಂತ, ಕುಸುಮ, ನರೇಂದ್ರ ಬರುವರು )

**ಶ್ರೀಕಾಂತ**— ಹಾಂ, ಕುಳಿತುಕೊಳ್ಳಿ.

**ಕಲ್ಲಪ್ಪ—** ಎಪ್ಪಾ, ನಿಮಗ ನಾಲ್ಕ ಮಂಧಿ ಮನಿ ಬಾಗಲದಾಗ ಕುಂತಾರಿ, ದಾರಿ ನೋಡಕೊಂತ.

**ಶ್ರೀಕಾಂತ—** ನನ್ನನ್ನು ಹೊರಲಿಕ್ಕೆ, ಪ್ರೀತಿಯಿಂದ ಮಾತಾಡಲು ಕುಳಿತರೆ ಸಾಕು. ಬಡ್ಡಿಯಿಂದ ಹಣ ವೈಯಲೂ ಜನರು ಬಂದರೆ ನನಗಂತೂ ಈ ವ್ಯವಹಾರವೇ ಸಾಕಾಗಿದೆ.

**ಕುಸುಮ—** ಪ್ರಾಪ್ತಿಯನ್ನು ಬಿಟ್ಟು ಮಾಡುವದೇನು? ಹೋಗಿ ಅಂದರೆ.......

**ಶ್ರೀಕಾಂತ—** ಹಾಂ! ನಿಜ ನಿಜ, ನರೇಂದ್ರಾ ಕುಳಿತುಕೋ ಈಗ ಬಂದೆ. ನಡೆ ಕಲ್ಯಾ ನಡೆ. (ಹೋಗುವರು.)

**ನರೇಂದ್ರ—** (ಕೈಹಿಡಿದು ಎಳೆದುಕೊಂಡು ನಗುತ್ತ) ಕುಸುಮಾ, ಹೇಗಿದ್ದಾರೆ ನಿಮ್ಮ ಪತಿರಾಯರು. (ಶ್ರೀಕಾಂತ ಕೆಮ್ಮುತ್ತ ಬರುವನು)

**ನರೇಂದ್ರ—** ತಾಯಿೂ, ನೀವು ಹೇಳಿದ ಆ ಬುಕ್ಕನ್ನು ತಂದು ಕೊಡುತ್ತೇನೆ.

**ಕುಸುಮ—** ಏನು ಮರೆತಿರುವಿರಿ?

**ಶ್ರೀಕಾಂತ—** ಹಿ, ಬಡಿಗಿ. (ನಗುತ್ತಾ ಹೋಗುವನು.)

**ಕುಸುಮ—** ನಮ್ಮಿೂ ಕಣ್ಣುಮುಚ್ಚಾಲೆ ಆಟವು ತಿಳಿಯದಾಗಿದೆ. ನಿನ್ನನ್ನು ನನ್ನವನೆಂದು ನಂಬಿರುವರು, ವಂಚನೆಯ ಭೇದವಿಲ್ಲ ಅವರೆದೆಯಲ್ಲಿ ಮಾಯೆ ತುಂಬಿದ ಮುದಿತನದ ಬುದ್ಧಿಯಲ್ಲಿ.

**ನರೇಂದ್ರ—** ಜಗವನು ಕುಣಿಸುತಿರುವ ಮಾಯೆಗೆ, ಮಾನವರು ಮಣಿದು ಉರುಳದಿರುವರೇ, ಅವಳ ಚರಣವಡಿಯಲ್ಲಿ!

**ಕುಸುಮ—** ಬೀಸಿದ ನಿನ್ನ ಸಾಹಸದ ಬಲೆಯಲ್ಲಿ ಬಂದು ಬಿದ್ದಿದೆ ಮನ ಬಯಸಿದಂತೆ ಭೋಗಿಸಲು ಕಾಮಿನಿಕಾಂಚನಗಳು!

**ನರೇಂದ್ರ—**ಅವೆಲ್ಲ ಒದಗಿರುವದು, ನಿನ್ನ ಬಲದಿಂದಲೆ! ಕುಸುಮಾ (ಕಿವಿಯಲ್ಲಿ ಹೇಳಿ) ಇಷ್ಟು ಮಾಡು. ಅಶೋಕ-ಶ್ರೀಕಾಂತರ ಆ ತಂದೆ-ಮಕ್ಕಳ ಮಧ್ಯದಲ್ಲಿ ಹುಟ್ಟಿಸುವೆ ದ್ವೇಷಾಗ್ನಿ ಜ್ವಾಲೆಯನ್ನು. ಶ್ರೀಕಾಂತ ನನ್ನು ಕಂಡು ಈಗ ಬರುವೆ. (ನಗುತ್ತ ಹೋಗುವನು)

**ಕುಸುಮ**— ಪೆಣ್ಮಣಿಯ ಕಣ್ಣಿನ ನೋಟಕ್ಕೆ ಕಂಗೆಟ್ಟು ಕುಣಿಯುವವು ನರಕುರಿಗಳು.

ಪದ— ರಾಗ: ಖಂಬಾವತಿ, ತಾಳ: ತ್ರಿತಾಳ

ನವಭಾವಾ ನಾರಿ ಬಹು ರೂಪ । ನಟಿಸಿ ನಾನೇ ನಟನಟನೆ ಭಾವದಿ ।
ನಾನೇ ಜವದಿ ತಾ । ಸಾಧಿಸುತೆ ॥ ಪ ॥ ತೋರಿ ತೋರಿ ಸ್ತ್ರೀ ಕುಮತಿ
ಭಾವದಿ । ಸರಸದಿ ಮೋಹಿಪ ನೀರೆ ವಿಷಮುನಾ ॥

**ಅಶೋಕ**— ಕುಸುಮಾ ತಾಯಿ, ಚಿಕ್ಕಪ್ಪನಿರುವನೇ ?

**ಕುಸುಮ**— ಅಶೋಕ, ನನ್ನಲ್ಲಿ ನಿನಗೆ ಬೇಸರಿಕೆಯೇ ? ಮನೆಗೆ ಬರುವದಿಲ್ಲ ಮೇಲಿಂದ ಮೇಲೆ, ಬಂದರೂ ಅವರನ್ನು ಕಂಡು ಮಾತಾಡುವದಿಲ್ಲ. ನನ್ನ ಅಪರಾಧವೇನಿದ್ದರೂ ಕ್ಷಮಿಸು ಅಶೋಕ.

**ಅಶೋಕ**— ತಾಯಿ, ನಿನಗೇಕೆ ಈ ಭಾವನೆ ? ನಾನಾರ ವಿಷಯದಲ್ಲಿಯೂ ಬೇಸರಿಕೆ ಮಾಡಿಕೊಳ್ಳುವವನಲ್ಲಾ. ಈ ಮನೆಯೊಳಗೆ ನನಗೇನು ಅಧಿಕಾರವಿಲ್ಲ.

**ಕುಸುಮ**— ಅವರ ಸ್ವಭಾವವು ನಿನಗೇನು ಹೊಸದಲ್ಲಾ, ನಾನು ನಿನಗೆ ಪ್ರತಿಯಿಲ್ಲಾ. ದೂರಿರುವದೇಕೆ ? ಈ ಬಂಗಲೆ, ಸಂಪದ ನನ್ನದಾಗಿರಲು, ಮನಬಯಸಿದ್ದನ್ನು ಉಂಡು ಸುಖವಾಗಿ ದಿನಗಳೆಯಬಾರದೇ ?

**ಅಶೋಕ**— ವಿದ್ಯೆ ಕಲಿಸಿ ಸಾಕಿ ಸಲುಹಿದ ಚಿಕ್ಕಪ್ಪನ ಉಪಕಾರದ ಹೊರೆ ಹೊತ್ತಿರುವ ನಾನು ಮತ್ತಾವನ ಸಂಪದಕ್ಕೆ ಕೈಯಿಟ್ಟು ಋಣಭಾರವ ಹೊರಲಿ, ದುಡಿದು ತಿನ್ನಲು ಸಾಮರ್ಥ್ಯವಿದೆ ಕಕ್ಕನು ಇಲ್ಲವೆ ?

**ಕುಸುಮ**— ಏಕೆ ನನ್ನೊಡನೆ ಮಾತಾಡಲು ನಿನಗೆ ಬೇಸರಿಕೆ ನಿಜ ಸಹಪಾಠಿಗಳಾಗಿ ಹೈಸ್ಕೂಲಿನಲ್ಲಿ ಓದುವಾಗ ನೀನು ನನ್ನನ್ನು ತಂಗಿಯಂತೆ ಕಂಡು ಬೇಕಾದ ಸಹಾಯ ನೀಡುತಿದ್ದೆ ನಾನು ತಬ್ಬಲಿ ಬಾಲೆಯೆಂದು ಪ್ರೀತಿಸುತಿದ್ದೆ ಆ ಪ್ರೇಮವಿಂದು ಅಳಿದು ಹೋಯಿತು ಈ ವಿವಾಹದಿಂದ ದೂರು ಮಾಡಿದೆ ನಿನ್ನನ್ನು ಈ ಮನೆಯ ಭಾಗ್ಯಕ್ಕೆ ನನ್ನ ಅಪರಾಧ ಕ್ಷಮಿಸು ಅಶೋಕಾ (ಕಾಲು ಬೀಳುವಳು ಮೇಲೆತ್ತುವನು. ನರೇಂದ್ರ ಶ್ರೀಕಾಂತನಿಗೆ ತೋರಿಸುವನು)

**ಅಶೋಕ**— ದೈವ ಬಲದಿಂದ ಬಂದಿದೆ ಈ ಭಾಗ್ಯ, ನಿನ್ನ ತಪ್ಪಿಲ್ಲ. ನನ್ನ ಕಕ್ಕನ ಮುದಿಮೋಹವಿದು ನಮ್ಮಿರ್ವರ ಆ ಸದ್ಭಾವನೆ ಪ್ರೇಮಕ್ಕೆ ಆತಂಕಿಸಿದ್ದು.

**ಕುಸುಮ**— (ಶ್ರೀಕಾಂತನನ್ನು ನೋಡಿ) ಅಶೋಕಾ ಬೇರೆ ಭಾವನೆಯಿಂದ ಕಾಣಬೇಡ ನನ್ನನ್ನು ನಾನು ನಿನ್ನ ತಾಯಿ ಸ್ವರೂಪಳು.

**ಅಶೋಕ**— ಮರೆಯಲಾರೆ ಮನದಿಂದ ನಿನ್ನನ್ನು, ನಿನ್ನೊಳಿರಿಸಿದ ಪ್ರೇಮಕ್ಕೆ ಚುತಿಯಿಲ್ಲಾ ನೀನೆನ್ನ....

**ಶ್ರೀಕಾಂತ**—ಅಶೋಕಾ ಎದೆ ಕೊರೆಯುವ ಮುಂದಿನ ಶಬ್ದಗಳನ್ನು ನುಡಿಸದಿರು.

**ಅಶೋಕ**— ಚಿಕ್ಕಪ್ಪಾ.

**ಕುಸುಮ**—(ಶ್ರೀಕಾಂತನನ್ನು ಅಪ್ಪಿ) ನೋಡಿ ಈ ನೀಚನು ನಾನು ನಿನ್ನ ತಾಯಿಯಂದರೂ ಕೇಳದೇ ಬಲಾತ್ಕರಿಸಲು ಬಂದಿದ್ದಾ ನಾನು ನಿಮ್ಮ ಬಳಿಗೆ ಓಡಿ ಬರುವವಳಿದ್ದೇ ಅಷ್ಟರಲ್ಲಿ ನೀವೆ ಬಂದಿರಿ (ಅಳುವಳು)

**ನರೇಂದ್ರ**— ಇದೇನು ಕುಸುಮಾತಾಯಿ ಅಳುತ್ತಿರುವಿರೇಕೆ ?

**ಕುಸುಮ**— ನರೇಂದ್ರಾ ಈ ನೀಚನು ನನ್ನ ಮೇಲೆ (ಅಳುವಳು)

**ನರೇಂದ್ರ**— ಅಂದರೇ !

**ಶ್ರೀಕಾಂತ**— ಕೈ ಹಿಡಿದು ಜಗ್ಗಿದನೇ, ಈ ಕುಲಾಧಮಾ ಮಾತೆಯನು ಮಮತೆಯವಳೆಂದು.

**ನರೇಂದ್ರ**— ಹರೇರಾಂ (ಕಿವಿ ಮುಚ್ಚಿಕೊಂಡು) ಶ್ರೀಮಂತರೇ, ಎಳೆತನದಿಂದಲೂ ಈರ್ವರು ಗೆಳೆಯರು ನಾನೊಪ್ಪಲಾರೆ, ಅಶೋಕನಿಂದಾ ಈ ಪ್ರಮಾದ ಘಟಿಸಿದೆಯಂದು.

**ಕುಸುಮ**— ಪವಿತ್ರವಾದ ನನ್ನ ಸತಿಶೀಲವನ್ನೇ ಹಾಳು ಮಾಡುತ್ತಿದ್ದ ಪಾಪಿ ನನ್ನ ಪತಿದೇವ ಬಾರದಿದ್ದರೇ ?

**ನರೇಂದ್ರ**— ಅಶೋಕಾ ! ಇವನು ಇಂಥ ಕೆಲಸಕ್ಕೆ ಛೇ ಛೇ ನೀವೇನು ಹೇಳಿದರೂ ಇದಕ್ಕೆ ನನ್ನ ಮನಸ್ಸು ಒಪ್ಪಲಾರದು.

**ಶ್ರೀಕಾಂತ—** ಕಣ್ಣಾರೆ ಕಂಡಿದ್ದೇನೆ ಈ ಕಪಟಿಯ ಹೇಯ ನಡತೆಯನ್ನು.

**ಅಶೋಕ—** ಚಿಕ್ಕಪ್ಪಾ, ಕಂಡ ದೃಶ್ಯದ ಪರಿಣಾಮವು ನಿನ್ನ ಮನದಲ್ಲಿ ವಿಷ ಭಾವನೆಯನ್ನು ಮೂಡಿಸಿದೆ ನನ್ನ ಮನದ ನಿರ್ಮಲ ಭಾವವನ್ನು ಕಂಡ ನೀನು ಹೀಗಾಡಬಹುದೇ. ಸತ್ಯಕ್ಕೂ ನನ್ನ ತಾಯಿ ಈ ಕುಸುಮಾ ತಾಯಿ.

**ಶ್ರೀಕಾಂತ—** ಮುಚ್ಚು ಬಾಯಿ ಮಾತೃದ್ರೋಹಿ ಕಣ್ಣಾರೆ ಕಂಡಿದ್ದರೂ ಅದನ್ನು ಅಲ್ಲಗಳೆಯಲು ಪ್ರಯತ್ನಿಸುತ್ತಿರುವೆಯಾ! ಹೃದಯ ಇಬ್ಭಾಗವಾಗುತ್ತಿದೆ. ನೀನೆಸಗಿದ ದೃಶ್ಯಾವಲೋಕನದಿಂದ ಇದಕ್ಕಿಂತ ಅಧಿಕ ಪಾಪ ವಿದೆಯೇ ಅಶೋಕಾ.

**ನರೇಂದ್ರ—** ಏನು ಅಶೋಕಾ, ವೇಷವನು ನೋಡಿದರೆ ಸಾತ್ವಿಕ ಶಾಂತಿ ರೂಪ ಮನದಲ್ಲಿ ನೆಲೆಸಿದೆ ಮಾತೆಯನ್ನು ಮೋಹಿಸುವ ಕಪಟರೂಪ.

**ಅಶೋಕ—** ವಂಚಕಾ, ಮಿತ್ರತ್ವದಲ್ಲಿ ಹಗೆ ಬಗೆದಿರುವ ನಿನ್ನಂತೆ ಹೀನ ಹೊಲೆಯನು ನಾನಲ್ಲ.

**ನರೇಂದ್ರ—** ಅಶೋಕಾ ಮುಂದಾಳುಗಳ ಗೌರವಕ್ಕೆ ಮಸಿ ಬಳಿಯುವ ಈ ದೇಶಭಕ್ತನ ವೇಷವು ಮುಚ್ಚಲಾರದು. ನೀನು ಮಾಡಿದ ನೀಚ ಕೃತ್ಯವನ್ನು

**ಶ್ರೀಕಾಂತ—** ಇವು ನಿನ್ನಂಥವನಿಗೆ ಸಲ್ಲುವ ಶಬ್ದಗಳಲ್ಲದೆ ನನಗಲ್ಲ ಸ್ವಾರ್ಥಿಯಮನವು ಸತ್ಯವನ್ನು ನುಡಿಯುಬಲ್ಲುದೆ.

**ನರೇಂದ್ರ—** ಮನೆಮುರುಕಾ, ನಿಮ್ಮ ವೇಷದಿಂದ ಮಂದಿಯನ್ನು ಬೆರಗುಗೊಳಿಸುತ್ತ ಶಬ್ದಾಡಂಬರದ ಡಾಂಭಿಕತನ ಬೀರುವ ಗೋಮುಖ ವ್ಯಾಘ್ರರೂಪಿಗಳು ದೇಶದ್ರೋಹಿಗಳಲ್ಲದೆ ಮತ್ತೇನು.

**ಅಶೋಕ—** ಪರ ಹೆಂಗಳೆಯರಲ್ಲಿ ಮಮತೆ ತೋರಿ, ಅವರ ಸಂಪದವನ್ನು ಅಪಹರಿಸಿ, ಅವರ ಗಂಡಂದಿರನ್ನು ವಂಚಿಸುತ್ತಾ ಜೀವನ ಸಾಗಿಸುವ ನಿನ್ನಂಥ ಮಾನವಿ ರಾಕ್ಷಸನು ಇಂಥಾ ಅನಾಚಾರಕ್ಕೆ ಮನ ಮಾಡುವನಲ್ಲದೆ ಸದ್ಭಾವನೆಯಿಂದ ಆತ್ಮಶುದ್ಧಿಯನ್ನು ಪಡೆದ ಈ ಜನಸೇವಕನ ಮನವು

ಮಾತೆಯನ್ನು ಮೋಹಿಸುವ ಹೊಲೆಮನವಲ್ಲವೆಂದು ಜಗದೀಶನ ಪಾದಸಾಕ್ಷಿಯಾಗಿ ಸಾರಿ ಸಾರಿ ಹೇಳುವೆ.

**ಶ್ರೀಕಾಂತ**— ಇವಳು ಬೇಡೆಂದು ಬೇಡಿದರೂ ಬಲುಮೆ ತೋರಿದ ನಿನ್ನ ಕೃತ್ಯದಿಂದ ಹೃದಯದಲ್ಲಿ ಹೆಚ್ಚುತಿರುವರೋಷಾ ನಿನ್ನನ್ನು ಕೊಲೆಗೈದರೂ ಶಾಂತವಾಗಲಾರದು ಅಣ್ಣನ ಮಗನೆಂದು ಜೀವಾಂತ್ಯದವರೆಗೆ ಸುಖವಾಗಿ ಬಾಳಲೆಂದು, ವಂಶಕ್ಕೆ ಒಬ್ಬನೆಂದು, ಸರ್ವಸಂಪದವನ್ನು ನಿನಗಾಗಿ ಕಾದಿಟ್ಟಿ ಅಶೋಕಾ ಅದೆಲ್ಲವನ್ನು ಮಸಣಗೂಡಿಸಿತು ಈ ನಿನ್ನ ದುರ್ನಡತೆಯಿಂದ.

**ಕುಸುಮ**— ಪರಪುರುಷರ ಸ್ಪರ್ಶವನ್ನು ಕನಸಿನಲ್ಲಿ ನೆನೆಯದ ಈ ಕುಲವಂತ ಕನ್ನೆಯ ಕೀರ್ತಿಗೆ ಕಲಂಕ ತಂದಿದ್ದನು.

**ನರೇಂದ್ರ**— ಸಾಹುಕಾರರೇ ಕೈಲಾಗದವರು ಭಿಕ್ಷುಕ ವೃತ್ತಿಯನ್ನು ಕೈಕೊಂಡಂತೆ ಈ ನಿರುದ್ಯೋಗಿಗಳು ಚರಿತಾರ್ಥವಾಸನಾಪುರ್ಣತೆಗಾಗಿ ಹಾಕಿಕೊಂಡಿದ್ದಾರೆ ಈ ಗಾಂಧಿ ಟೊಪ್ಪಿಗೆ.

**ಅಶೋಕ**— ಗಾಂಧಿಟೊಪ್ಪಿಗೆ ಅರವತ್ತುವರುಷಗಳ ವರೆಗೆ ಅವಿಶ್ರಾಂತವಾಗಿ ದುಡಿದು, ಭಾರತಕ್ಕೆ ಸ್ವಾತಂತ್ರವನ್ನು ತಂದ ಗಾಂಧಿಟೊಪ್ಪಿಗೆ, ಮತಭಾಷೆಗಳ ತಿಕ್ಕಾಟದಿಂದ ಭಾರತಿಯ ಸಂಸ್ಕೃತಿಯ ಸ್ತಂಭವನೆ ಕೊರೆಯುತಿದ್ದ ದೊಂಬಿಯನ್ನೇ ಶಾಂತಿ ಪಾಠದಿ ನಿಲ್ಲಿಸಿ, ಸಮತಾ ಭಾವವನು ಸಮಾಜ ಜೀವಿಗಳಲ್ಲಿ ತುಂಬಿರುವದು ಇದೇ ಗಾಂಧಿ ಟೊಪ್ಪಿಗೆ. ಪರಕೀಯರಿಂದ ಪರಿಪರಿಯ ಕಷ್ಟನಷ್ಟಗಳನ್ನು ಸಹಿಸಿ, ಅಸಂಖ್ಯ ಬಂಧು-ಭಗಿನಿಯರ ತಾಯ್ತಂದೆ ಕಂದಮ್ಮಗಳ ರಕ್ತಮಾಂಸ ಕರ್ದಮದಲ್ಲಿ ರಾಕ್ಷಸೀ ನೃತ್ಯವನೇಗೈದ ಬ್ರಿಟೀಶರ ಅಖಂಡ ಸಾಮ್ರಾಜ್ಯ ಸೂತ್ರವನ್ನು ನಡುರಾತ್ರಿಯಲ್ಲಿ ಕೈಬಿಡಿಸಿ, ಏಕಛತ್ರದಿಂದೊಪ್ಪುವ ತ್ರಿವರ್ಣ ರಾಷ್ಟ್ರಧ್ವಜವನ್ನೇ ಹಾರಿಸಿದ ಗಾಂಧಿ ಟೊಪ್ಪಿಗೆ....

**ಶ್ರೀಕಾಂತ**— ಸ್ಟಾಪ್‌ಯುವರ್ ಲಚ್ಚರ, ಕಲ್ಯಾ ಹೊರದೂಡು ಬಂಗಲೆಯಿಂದ.

**ನರೇಂದ್ರ**— ಸಾವುಕಾರರೇ ಸಹನೆಯಿರಲಿ.

**ಶ್ರೀಕಾಂತ**— ಯಾರೂ ಮಾತನಾಡುವ ಕಾರಣವಿಲ್ಲಾ ಕಲ್ಯಾ ಹಾಗೆ ನಿಂತಿಯಲ್ಲ ಹೊರದೂಡು.

**ಅಶೋಕ**— ಚಿಕ್ಕಪ್ಪಾ ನಿನ್ನ ಮೃತ್ಯುವಿಗಾಗಿ ನಿನ್ನ ಮನೆಯನ್ನು ಪ್ರವೇಶಿಸಿದ ಈ ನಾರಿಯು ನಿನ್ನ ಸಂಪದಕ್ಕೆ ಬಾಯ್ತೆರೆದು ಕುಳಿತಿರುವ ಈ ನಿನ್ನ ಹಿತಶತ್ರುವು, ಇಂದಿಲ್ಲ ನಾಳೆ ಈ ಬಂಗಲೆಯ ನೆಲಕ್ಕೆ ನಿನ್ನ ರಕ್ತದಿಂದ ಥಳಿಹಾಕಿ ಬರಲಿರುವ ಭಾಗ್ಯಲಕ್ಷ್ಮಿಗೆ ನಿನ್ನ ದೇಹವನೆ ಬಲಿಕೊಟ್ಟು ಈ ಜಾರಿಣಿಯೊಡನೆ ಸರಸವಾಡುವನು ಮರೆಯದಿರು (ಹೋಗುವನು ಶ್ರೀಕಾಂತ ಸಿಟ್ಟಿನಲ್ಲಿ ಒಳಗೆ ಹೊಗುವನು ಕುಸುಮ ನರೇಂದ್ರ ನಗುತ್ತ ಕೈಹಿಡಿದು)

**ಕುಸುಮ**— ನರೇಂದ್ರಾ ಹೇಗಾಯಿತು.

**ನರೇಂದ್ರ**— ಬೆಕ್ಕಸಬೆರಗಾಯಿತು ಜಗವು, ನಿನ್ನ ಚಾತುರ್ಯದ ನಟನಾ ಕಲೆಗೆ (ಅಪ್ಪಿಕೊಂಡು ನಗುತ್ತ ಹೋಗುವರು ಕಲ್ಯಾ ನೋಡಿ ಹಣಿ ಬಡಿದುಕೊಳ್ಳುತ್ತ ರಸ್ತಾ ಪಡದೆಯು ಮುಂದೆ ಬರುವನು)

**ಕಲ್ಲಪ್ಪ**— ನೋಡಿದ್ರೆನಪಾ ದೈವಾ, ಹೆಣ್ಣಿನಜಾಲಾ ಸಾವಕಾರನ ಕಣ್ಣಾಗ ಮಣ್ಣವಗದು ನರೇಂದ್ರಪ್ಪನ ಜೊತಿಗೆ ಚಕ್ಕಂದ ಆಡ್ತಾಳ; ಮತ್ತ ಮ್ಯಾಲೆ ಗರತಿ ಹಂಗಸೋಗ ಮಾಡ್ತಾಳ, ಕೊರಡು ಕೊನರಿತೇನ್ರಿ ಸುನ್ನು ಗದ್ಲಾಹಾಕತಾನ ಈ ಮುದಿಸಾವಕಾರ ಈ ಹಗರಣದ ಹೆಣ್ಣಿನ ಜೊತಿಗೆ.

**ಪದ** ರಾಗ : ಸಾರಂಗ ತಾಳ : ಏಕತಾಳ

ಹೆಣ್ಣಿನ ಹಿರಿಮೆಯ ಮಾಯಿಗೆ ಸಿಲುಕಿ । ಬನ್ನಬಟ್ಟು ಬಳಲುವದು ಜನಾ । ಹೆಣ್ಣಿನ ಆಳವ ಅರಿತವರಿಲ್ಲಾ । ವಶವಾದರ್ರುಜನ ಹರಿಹರ ಬಮ್ಮರು ॥ ಪ ॥ ಹೆಣ್ಣಿನ ಶೀಲವ ಮೆರೆಸಿತು ಫ್ಯಾಶನ್ ಮಣ್ಣುಗೂಡಿಸಿತು ಸತಿಪತಿ ಧರಮ । ಬಗೆಬಗೆ ತಿನುಸಿನ ಬಂಟರನೋಡುತ । ಸೊಗಸಿನ ಉಡು ಪಿನ ಬಿಂಕದಿ ಮೆರೆಯುತ । ಕೊನೆಯಲಿ ಗಂಡನ ಬಾಯೊಳು ಮಣ್ಣು । ಹಾಕಿ ಕೈಯಕೊಟ್ಟೋಡುವರು ॥ ೧ ॥ ಹಡೆದತಾಯಿ ಮನೆ ಮಡದಿ ಮಕ್ಕಳನು ಮರೆತು ಮೋಹ । ಪರ ಸತಿಯೊಳಿಡುತಲಿ ಚಿನ್ನ ಹೊಲಮನೆಯು ನುಣ್ಣಗೆ ಸಾಗುತೆ । ಮಣ್ಣಿಗೆ ರೊಕ್ಕವು ಸಿಗದಣ್ಣಾ ॥ ೨ ॥ ಕಲಿಯುಗ ದರುಮವು ಬದಲಿಸಿತಣ್ಣಾ । ಮಳೆಬೆಳೆ ಇಲ್ಲದೆ ಕೂಳಿಲ್ಲಣ್ಣಾ । ತಾಯಿಮಗ ನೊಳು ಅಣ್ಣತಂಗಿಯೊಳು । ಸರಸವಾಡುವರು ನೊಡಣ್ಣಾ ॥ ೩ ॥

ದ್ವಿತೀಯಾಂಕ ಮುಗಿದುದು

## ತೃತೀಯಾಂಕ



### ಪ್ರವೇಶ ೧೮. ಯಮುನವ್ವನ ಮನೆ

**ಕನಕಿ**— ಯವ್ವಾ ನಾ ಮರೆವಲ್ಲೆ ಇವನ ಮನಿಗೆ ಹೋಗಾಕಾ.

**ಕಲ್ಲಪ್ಪ**— ಏನ ಮಾಡಿದ್ರು ಬಿಡಾವಲ್ಲ ಈ ಕಲ್ಯಾ, ನಿನ್ನ ಎಳ ಕೊಂಡು ಹೋಗತೀನಿ.

**ಯಮುನವ್ವ**— ಏ, ಏ ತಮ್ಮಾ ತಡಿ, ಹಂಗ ಮಾಡಬ್ಯಾಡ.

**ಕನಕಿ**— ಕಳಸಬ್ಯಾಡಯವ್ವಾ ಇವನ ಜೊತಿಗೆ.

**ಕಲ್ಲಪ್ಪ**— ಅತ್ತಿ, ಹಿಂದೆ ಡೊಗ್ಗಿದ್ರ ಬಿಡಾವಂತಾ ತಿಳಿದೇನು ಏ ಹುಡುಗಿ ನಾಯಾರ ವಿರಭದ್ರದೇವ್ರ ವಕ್ಕಲು ಈಗ ಈರನ ಅವತಾರತೊಟ್ಟೆ ನಂದ್ರ ತಾಯಿ ಮಗಳು ಕುಣತಾ ಮಾಡಿರಿ ಕುಣತಾ.

**ಯಮುನವ್ವ**— ಏ ತಮ್ಮ, ನಿಮ್ಮ ಅವರ ಮನಸ್ಸು ಒಂದಿದ್ರಲ್ಲಾ ಸಂಸಾರ ನಡಿಯೋದು.

**ಕಲ್ಲಪ್ಪ**— ಅಂದ್ರ ಈಗ ಆಕಿ ಮನಸ್ಸಿಲ್ಲಾ ಬಿಟ್ಟು ಹೋಗು ಅಂತಿ ಯೇನು ?

**ಕನಕಿ**— ಏ ನೀ ಅತ್ತಿ ಅಲ್ಲ ಕತ್ತಿ, ನೋಡಿದೇನಯವ್ವಾ ಹೆಂಗ ಮಾತಾಡತಾನ ಇವಾ ದಿಕ್ಕೇಡಿ, ಇವನ ನಾಲ್ಗಿ ಸೇದ್ಲಿ.

**ಯಮುನವ್ವ**— ಈಕಿಮ್ಯಾಲೆ ನಿನ್ನ ಸಿಟ್ಟು ಯಾಕ ಬಂತು ? ನೀ ಯಾಕ ಮನಿ ಬಿಟ್ಟು ಹೋಗಂದೀ ?

**ಕಲ್ಲಪ್ಪ**— ಅಕೀನ ಕೇಳು, ಗಂಡ್ಸಾಗಿ ನಾ ಏನ ಹೇಳ್ಲಿ ?

**ಯಮುನವ್ವ**— ಏನ ನನಮಗಳ !

**ಕನಕಿ**— ಸುಮ್ಮಸುಮ್ಮನ ನೀ ಯಾರ್ನ ನೋಡಿ ಅಂತಾ ದೋಸಾ ಹೊರಿಸ್ಯಾನ, ಇವನ ಬಾಗಲಿಗೆ ಬೇಲೀ ಬಡಿಲೀ ?

**ಯಮುನವ್ವ**— ಹಂಗ ಸುಮ್ನ ನನ್ನ ಮಗಳು ನೋಡಾಕೆಲ್ಲಾ ಹೊಟ್ಯಾಗಿನ ಕಳ್ಳು ಕೊಯ್ದು ನಿಮ್ಮ ಕೈಯಾಗ ಕೊಟ್ಟಿರ್ತಾರಂದಮ್ಯಾಲೆ ಕಾಣದ ದೋಸಾ ಹೊರಸಬಾರ್ದು.

**ಕಲ್ಲಪ್ಪ**— ಹೆಂಗ ನುಣುಪ ಮಾಡಿ ಮಾತಾಡತಾಳ ನೋಡು ಕುಣಕಲಾಡಿ.

**ಯಮುನವ್ವ**— ಏ ತಮ್ಮ, ಎಲ್ಲರ ಮನ್ಯಾಗೂ ದ್ವಾಸಿಗೆ ತೂತು ಇದ್ದದ್ದ, ಸುಮ್ನ ಕರಕೊಂಡು ಹೋಗು.

**ಕಲ್ಲಪ್ಪ**— ಊ ಹೂ, ನೀನು ನಿನ್ನ ಮಗಳು ತಪ್ಪಾತೂ ಅಂತಾ ಈ ಕಲ್ಲ್ಯಾನ ಕಾಲು ಹಿಡದಾಗ, ಈಕಿ ನಮ್ಮ ಮನಿ ಹೊಸ್ತಲಾ ತುಳಿಯೋದು.

**ಯಮುನವ್ವ**— ಯಾರೂ ಇಲ್ಲಂತಾ ಕಕಲಾತಿಗೆ ಮಗಳ್ನ ಕೊಟ್ರ ಈಗ್ಹಿಂಗ ಮಾತಾಡ್ತಿಯಲಾ

**ಕಲ್ಲಪ್ಪ**— ಈಕಿ ದೊಡ್ಡಕಿ ಆಗುವದಕ್ಕಿಂತ ಮೊದಲು ತೆರವಿನ ಹಣ ನುಂಗಿ ಕುಂತಿ, ಮತ್ತ ವರ್ಷಾ ವರ್ಷಾ ದುಡಿದದ್ದು ನಿನಗ ಕೊಟ್ಟೆ. ಈಕಿ ಲಗು ನನ್ನ ಕೈ ಹಿಡಿಲಿದ್ರ ನನ್ನ ನುಂಗತಿದ್ದಿ.

**ಯಮುನವ್ವ**— ಇಂತಾದು ನಮ್ಮ ವಂಶದಾಗ ಇಲ್ಲಾ.

**ಕಲ್ಲಪ್ಪ**— ಮಗಳ್ನ ಗಂಡನಮನಿಗೆ ಕಳಿಸಿಕೊಡೋದು ಆಲ್ಲೇನವ್ವಾ

**ಯಮುನವ್ವ**— ಹಂಗೆಲ್ಲಾ ಮುಂದ ಮಾತಾಡಬ್ಯಾಡ. ನಾನಂದ್ರ, ಏನಂತಾ ತಿಳಿದೀ, ನಾ ಎಲ್ಲಾ ಮಾಡಿ ಮುಗಿಸಿದಾಕಿ.

**ಕಲ್ಲಪ್ಪ**— ತಳೀನ ಹಂಗ ಹೊಂಟೈತಂದ ಮ್ಯಾಲೆ, ಚಾಳಿ ಎಲ್ಲಿ ಹೋಗಬೇಕ ಯತ್ತಿ !

**ಯಮುನವ್ವ**— ನೀ ಹಿಂಗ ಅಡ್ಡಾದಿಡ್ಡಿ ಮಾತಾಡ್ತಿ ಅಂದಮ್ಯಾಲೆ, ನನ್ನ ಮಗಳ್ನ ಕಳ್ಸದಿಲ್ಲಾ, ಕಳ್ಸದಿಲ್ಲಾ.

**ಕಲ್ಲಪ್ಪ**— ಕೆಟ್ಟೆ ಯತ್ತೀ, ಇಲ್ಲಿ

**ಯಮುನವ್ವ**— ನಿನ್ನ ತೆಲಿ ಕೆಟ್ಟೈತಿ.

ಕಲ್ಲಪ್ಪ— ನನ್ನ ತೆಲಿ ಕೆಟ್ಟಿಲ್ಲಾ. ಮಗಳ್ನ ಗಂಡನ ಮನಿಗೇ ಕಳಸ ದಿಲ್ಲಾ ಅಂತಾ ಹೇಳ್ತಿಯಲ್ಲಾ. ಮುದಿಕ್ಯಾಗಿ ನಿನ್ನ ತೆಲಿ ಕೆಟ್ಟೈತಿ.

ಯಮುನವ್ವ— ಎಲಾ ಮೂಳಾ, ನನಗ ಮುದಕೀ ಅಂತೀಯಲಾ ಒಂದ ಮಗಳ ತಾಯ್ಗಿ, ಐ ನನ ದೈವಾ.

ಕಲ್ಲಪ್ಪ— ಐ ನನ ಕರ್ಮ! ಅಗಸರ ಮುದಿಕತ್ತಿ ಆಗೀದಿ. ತೀಡಿ ಕೊಂತಿಯೇನ, ಪುಗ್ಗಾ ತಕ್ಕೊಂತಿಯೇನ, ಒನಪುವೈಯ್ಯಾರ ಮಾಡ್ತಿಯೇನ ನೀನ ಹಿಂಗ ಇದ್ದವ್ಯಾಲೆ ಮಗಳ್ನ ಹೆಂಗ ಬಾಳೇ ಮಾಡಿಗೊಟ್ಟೆಯೇ ಎವ್ವಾ ಏಳಮಕ್ಕಳ ತಾಯವ್ವಾ!

ಕನಕಿ— ಇರ್ಲಿ ಹೋಗು. ಅದನ್ನೆಲ್ಲಾ ನೀ ಏನ ಹೇಳ್ತಿ.

ಕಲ್ಲಪ್ಪ— ನೀ ಬರಬ್ಯಾಡ ನಡುವೆ ಮಿಡಿಚಿ, ಒಂದ ಹೊಡತಕ್ಕ ಮಡಚಿ.

ಯಮುನವ್ವ— ಇಗಾ ತಮ್ಮಾ, ಸಿಟ್ಟಿನ ಕೈಯಾಗ ಬುದ್ಧಿಕೊಟ್ರ, ಕೆಡ್ತಾರ್ಯಾರು? ಹಂಗ ಮಾಡಬ್ಯಾಡಾ. ಬಾ ಕುಂತ್ಕಾ.

ಕಲ್ಲಪ್ಪ— ಇದೆಲ್ಲ ಉಪಚಾರ, ನಿನ್ನ ಹೊಸಾ ಅಳಿಯಾಗ ಮಾಡು, ಹೊಸಾ ಅಳಿಯಾಗ.

ಯಮುನವ್ವ— ಅಯ್ಯ, ಅವನ್ಯಾರಾ.

ಕಲ್ಲಪ್ಪ— ನಿನ್ನ ಮಗಳ ಹೊಸಾ ಗೆಣಿಕಾರಾ.

ಕನಕಿ— ಸುಳ್ಳ, ಇದೆಲ್ಲಾ ಬಾಯಿ ಉಪಚಾರ.

ಕಲ್ಲಪ್ಪ— ಸಮಕ್ಷಮಾ ಕಣ್ಣಾರೆ ಕಂಡಿನಲೇ. ಆಹಾಹಾ ರುದ್ರಾ.

ಯಮುನವ್ವ— ಅಯ್ಯಯಪ್ಪಾ ಬರ್ರ್ಯೋ.

ಕನಕಿ— ಅಯ್ಯಯ್ಯ ಯವ್ವಾ ನಡಮುರಿತಾನಾ.

ಚಿಂತಾಮಣಿ— (ಮುದುಕನ ವೇಷದಲ್ಲಿ ಬರುವನು) ಆಹಾಹಾ, ಕಲ್ಲಪ್ಪಾ ಶಾಂತಿ ಶಾಂತಿ.

ಯಮುನವ್ವ— ಬಿಡು ನಮ್ಮಪ್ಪಾ ದೇವರ ಬಂದಂಗ ಬಂದಿ ನೋಡಿದ್ಯಾ ಹುಡುಗಿ ಡುಬ್ಬಾ ಹಸರೆರೇತಿ.

**ಕಲ್ಲಪ್ಪ**— ಡಾಂಬರ ಕಾಸಿ ಡುಬ್ಬಕ್ಕಬಡಿ ಹಸರಬಾರ ಹೋಗತಾವ

**ಚಿಂತಾಮಣಿ**— ಏನಪ್ಪ ಇದು ವೀರಾವೇಶಾ.

**ಕಲ್ಲಪ್ಪ**— ನನ್ನ ಹೆಣ್ತಿ ಕಳ್ಸಂದ್ರು ಇಲ್ಲಾ ಅನಬೇಕ ಯಜಮಾನ.

**ಚಿಂತಾಮಣಿ**— ಕುಳಿತುಕೊ ನಾನೆಲ್ಲಾ ಸರಿ ಮಾಡುತ್ತೇನೆ ನಿಮಗೆ ತಿಳುವಳಿಕೆಯಿಲ್ಲಾ ( ಸ್ವ ) ನಾನು ಚಿಂತಾಮಣಿ ತೆಗೆದುಕೋ ಈ ಮದ್ದನ್ನು (ಪ್ರ.) ಹೋಗಿ (ಯಮನವ್ವ ನಗುತ್ತ ಹೋಗುವಳು) ಎಂದಿಗೂ ಹಾಗೆನ್ನಬಾರದು ಪತಿ ಇದ್ದೆಡೆಸತಿ, ಸತಿಯಿದ್ದೆಡೆ ಪತಿ ಇವರೀರ್ವರು ಕೂಡಿ ಮಾಡಿದರೆ ಸಂಸಾರ. ಏನಮ್ಮ ಕನಕಮ್ಮಾ ನೀನು ಸಣ್ಣವಳು ಒಲ್ಲೆನ ಬಾರದು ಗಂಡನೆಲ್ಲಿ ನೀನೆಲ್ಲಿ.

**ಕಲ್ಲಪ್ಪ**— ಹಿಂಗ ಹೇಳಪ್ಪಾ ಇದು ಬುದ್ದಿವಂತರ ಮಾತು.

**ಚಿಂತಾಮಣಿ**— ಕುಳಿತುಕೊಳ್ಳೊ ನಾನೆಲ್ಲಾ ಹೇಳುತ್ತೇನೆ.

**ಕಲ್ಲಪ್ಪ**— ನಾ ಕುತಗಂತೀನಿ ನೀ ಹೇಳ.

**ಚಿಂತಾಮಣಿ**— ಏನಮ್ಮಾ ಹಾಗೆ ನಿಂತಿರಲ್ಲಾ ಸ್ವಲ್ಪ ಉಪಚಾರ ಮಾಡ್ರಿ ಸಿಟ್ಟು ಇಳೀಲಿ ಮನೆಯಲ್ಲಿ ಹಾಲು ಇಲ್ಲವೇನಮ್ಮಾ

**ಯಮನವ್ವ**— ಆದಾವು (ಸಿಟ್ಟಿನಿಂದ)

**ಕಲ್ಲಪ್ಪ**— ಲೇ, ಹಂಗ ಕಣ್ಣು ಮೂಗು ಅಳ್ಳಸಬ್ಯಾಡ.

**ಚಿಂತಾಮಣಿ**— ಕುಳಿತುಕೊಳ್ಳೊ ನಾನು ಹೇಳತೀನಿ.

**ಕಲ್ಲಪ್ಪ**— ನಾ ಕುತಕೊತೀನಿ ನೀ ಹೇಳು.

**ಚಿಂತಾಮಣಿ**— ಹಾಗೆ ಹೆಂಗಸರಿಗೆ ಸಿಟ್ಟು ಒಳ್ಳೇದಲ್ಲಾ ತಂದು ಕೊಡ್ರಿ ಕುಡೀಲಿ.

**ಯಮನವ್ವ**—(ಕಾಣುವಂತೆ ತಪ್ಪಲ ರಸವನ್ನು ಹಿಂಡಿ)ತಗೊಕುಡಿ

**ಕಲ್ಲಪ್ಪ**— ಲೇ, (ಎಳೆಯಲು ಹೋಗುವನು ಯಮನವ್ವ ಕನಕಿ ಮೆಟ್ಟಿ ಬೀಳುವರು)

**ಚಿಂತಾಮಣಿ**— ಛೆ, ಛೆ, ಈ ನಡತೆ ಸರಿಯಲ್ಲಮ್ಮಾ, ನೀನು ಬಾ, ನಿನ್ನ ಗಂಡನಿಗೆ ನೀನೇ ಕುಡಿಸು.

**ಕಲ್ಲಪ್ಪ**— ಮತ್ತೇನಂದ್ರೀ. (ಕನಕಿ ಹೆದರಿ ಹಿಂದೆ ಸರಿದು)

**ಚಿಂತಾಮಣಿ**— ಕುಳಿತುಕೊಳ್ಳ.

**ಕಲ್ಲಪ್ಪ**— ನಾ ಕುಂದರತೀನಿ ನೀ ಹೇಳ.

**ಚಿಂತಾಮಣಿ**— ಹಾಲು ಸಕ್ಕರಿ ಕುಡಿದು, ನೀನು ನಿನ್ನ ಹೆಂಡತಿ ಹಾಲು ಬೆಲ್ಲವಾಗಿರ್ರಿ. (ಯಮನವ್ವ ಕನಕಿ ಕಿವಿಯಲ್ಲಿ ಹೇಳುವಳು ಕನಕಿ ನಗುತ್ತ ಹೋಗಿ)

**ಕನಕಿ**— ಹಂಗ ಮಾಡಬ್ಯಾಡ ಕುಡಿ, ನೀ ಹೆಂಗ ಹೇಳ್ತಿ ಹಂಗ ಕೇಳ್ತಿನಿ (ಕುಡಿಸುವಳು)

**ಚಿಂತಾಮಣಿ**— ಇದಕ್ಕೆನ್ನಬೇಕು ಚಾನ್ಸ್.

**ಕಲ್ಲಪ್ಪ**— ( ಎಲ್ಲರನ್ನು ನೋಡಿ ನಗುವನು ) ಹೆಣ್ತಿ ಅನಬೇಕು ನಿನಗ, ಅತ್ತಿ ಅನಬೇಕು ಇಕೀಗ, ಅಳಿಯಾ ಅನಬೇಕು ನನಗ, ಸ್ವಾದರ ಮಾವಾ ಅನಬೇಕು ಇವಗ !

**ಚಿಂತಾಮಣಿ**— ಹೋಗಪ್ಪಾ, ಸಾಹುಕಾರರ ಮನೆ ಕೆಲಸಕ್ಕೆ.

**ಕಲ್ಲಪ್ಪ**— ಹೋಗದೇನ ಮಾಡ್ಲೆಪ್ಪಾ, ನಮ್ಮನ್ನ ಕಳಸಾಕ ಈಟ ರಾಜೀ ಮಾಡೀರಿ. ಮತ್ತೇನೈತಿ ಮಾವಾ, ಹೊಡಿ ಹೋಳಿಗಿ ತುಪ್ಪಾ. (ನಗುತ್ತ ಹೋಗುವನು)

**ಚಿಂತಾಮಣಿ**— ಹೇಗಾಯಿತು ಯಮನವ್ವಾ.

**ಯಮನವ್ವ**— ಐ ನನ ಗಿಳಿಯೇ, ಇದ್ದರ ನಿನ್ನಂತಾ ಬುದ್ದಿವಂತಾ ಇರಬೇಕು. ಮನ್ಯಾಗ ಕೆಲಸಾ ಮಾಡಾಕ ಇಲ್ಲಂತಾ ನನ್ನ ಮಗಳ್ನ ಇವನಿಗೆ ಕೊಟ್ಟೆದ್ದೆ.

**ಕನಕಿ**— ಇವತ್ತು ಬಾಳೇಕ, ಹೊಸಾ ಬೆಳಕ ಬಂತು.

(ರಸ್ತಾ ಪಡದೆಯ ಮುಂದೆ ಹೇಳಬೇಕು.)

## ಪ್ರವೇಶ ೧೯. ಶ್ರೀಕಾಂತನ ಬಂಗ್ಲೆ

**ಚಿಂತಾಮಣಿ**— (ಚಿಂತಾಮಣಿ ನಾಟ್ಯ ಕಲಿಸುವನು) ಹಾಗಲ್ಲಾ ಕಾಲಕರವಿನ್ಯಾಸಗಳು ಕಾಲಕ್ಕೆ ಸರಿಯಾಗಿ ಭಾವನೆಯನ್ನು ಹೊಂದಿಕೊಂಡು

ಹೋಗಬೇಕು, ನಿಂತುಕೊಳ್ಳಿ ಸರಿಯಾಗಿ ಮುಖವು ಹೀಗಿರಬೇಕು. (ಗದ್ದ ಹಿಡಿದು ತೋರಿಸುವಷ್ಟರಲ್ಲಿ ಶ್ರೀಕಾಂತ ಹಿಂದೆ ಬಂದು ನೋಡಿ ಸಿಟ್ಟಿನಿಂದ) ಛೀ, ಛೀ, ಹಾಗಲ್ಲಾ ಹೀಗೆ. ಭುಜಗಳು ಹೀಗಿರಬೇಕು. ಹೂ, ಪ್ರಾರಂಭಿಸಿರಿ ಕತ್ತಿನ ಥಗಿನಕ ಥಗಿನಕ ಕತ್ತಿನ.

**ಶ್ರೀಕಾಂತ**— ಲೇ ಕತ್ತಿಯ ಮಗನೆ, ಇವಳ ಗಲ್ಲ ಭುಜಗಳನ್ನು ಮುಟ್ಟುವಿಯೇನು? ಗೆಟ್‌ಔಟ್ ಇನ್ನೊಮ್ಮೆ ಈ ಮನೆಯೊಳಗೆ ಬಂದದ್ದಾದರೆ ನಿನ್ನ ಮೈ ಮೆತ್ತಗಾದೀತು.

**ಚಿಂತಾಮಣಿ**— ಸಾಹುಕಾರರೇ ತಾವು ವಿಪರೀತ ಕಲ್ಪನೆ ಮಾಡಿಕೊಂಡಂತೆ ಕಾಣುತ್ತದೆ.

**ಶ್ರೀಕಾಂತ**— ನಾನಿವಳ ಗಂಡನು ಸಮ್ಮುಖದಲ್ಲಿ ನಿಂತಿರಲು, ನೀನಿವಳ ಗಲ್ಲ ಭುಜಗಳನ್ನು ಮುಟ್ಟುವದಂದರೇನು?

**ಚಿಂತಾಮಣಿ**— ಅದು ಅಭಿನಯಾ ತೋರಿಸುವ ರೀತಿ, ನನಗೆ ಹೀಗೆಂದಿರಿ, ಸಿನಿಮಾ ಡಾಯರೆಕ್ಟರನ್ನು ನೋಡಿದ್ದಾದರೆ "ನೀವು ಗುಂಡು ಹಾಕುತ್ತಿದ್ದಿರೇನೋ ಶೂಟಿಂಗಿನ ಸಮಯದಲ್ಲಿ ಇದಕ್ಕಿಂತಲೂ ಭೀಭತ್ಸ ಅಭಿನಯಗಳನ್ನು ಸ್ತ್ರೀಯರ ಮೈ ಕೈ ಮುಟ್ಟಿ ತೋರಿಸಬೇಕಾಗುತ್ತದೆ.

**ಶ್ರೀಕಾಂತ**— ಹಾಗೆ ನೀನು ನನ್ನ ಹೆಂಡತಿಯ ಮೈ ಕೈ ಮುಟ್ಟಿದಿಯೇನು? ಮುಚ್ಚು ಬಾಯಿ, ನಿಮ್ಮಂಥವರಿಂದಾ ಕಲಾವಂತರ ಕೀರ್ತಿಯು ಹಾಳಾಗುತ್ತಾ ನಡೆದಿದೆ. ಹೊರಡು ಮೊದಲು ಮನೆಯಿಂದಾ.

**ಚಿಂತಾಮಣಿ**— ಇವರ ಆಗ್ರಹಕ್ಕಾಗಿ ನಾನಿಲ್ಲಿಗೆ ಪ್ರತಿದಿನ ಬರುತ್ತಿರುವದು. ಕಲಾ ಜೀವಿಗಳಿಗೆ ನಿಮ್ಮಂಥವರ ಆಶ್ರಯ ಬೇಕೇಬೇಕು. ದಯಮಾಡಿ ಕೊಪಿಸಿಕೊಳ್ಳಬೇಡಿ.

**ಶ್ರೀಕಾಂತ**— ಮತ್ತೆ ಅದೇ?

**ಕುಸುಮ**— ಹೋಗಲಿ ಬಿಡಿ ಶಾಂತಿಯಿರಲಿ!

**ಶ್ರೀಕಾಂತ**— ತಾವು ದಯಮಾಡಿ ಸುಮ್ಮನಿರಿ.

**ಚಿಂತಾಮಣಿ**— ನನಗಾಗಿ ಇವರ ಮೇಲೆ ಕೋಪಿಸಿಕೊಳ್ಳಬೇಡಿ!

ಶ್ರೀಕಾಂತ— ಲೇ ಮಗನೆ, ಸೆಳೆಯಲೇನು ಬೆತ್ತದಿಂದಾ ಹೊರಡು.

ಕುಸುಮ— ಅವನನ್ನೇಕೆ ಹೊರಗೆ ಹಾಕಿದಿರಿ. ನನಗೆ ದಿನವು ನೃತ್ಯಾಭ್ಯಾಸವಿಲ್ಲದಿದ್ದರೆ, ಹೊತ್ತೇ ಹೋಗುವದಿಲ್ಲ.

ಶ್ರೀಕಾಂತ— ಸಾಕು ನೀನಿನ್ನು ನೃತ್ಯ ಮಾಡುವದು ಬೇಡ.

ಕುಸುಮ— ಇನ್ನು ಸ್ವಲ್ಪ ದಿನಗಳಲ್ಲಿ ನಾನು ಸಿನಿಮಾ ಪ್ರಪಂಚ ದಲ್ಲಿ ಕಾಲಿಡತಕ್ಕವಳಿದ್ದೇನೆ. ಇದೋ ಇಂದಿನಚಿತ್ರದಲ್ಲಿ ಶ್ರಿಕಾಂತಬಾಬುಗಳ ಹೆಂಡತಿಯು ಕುಡುಕನ ಹೆಂಡತಿಯಾಗಿದ್ದಳು, ಮತ್ತೊಂದು ಚಿತ್ರದಲ್ಲಿ ವಿಧವೆ ಯಾಗಿದ್ದಳು ಇನ್ನೊಂದ ಚಿತ್ರದಲ್ಲಿ ಜಾರಿಣಿಯಾಗಿದ್ದಳೆಂದು ಜಗದ ಜನತೆ ನಿಮ್ಮನ್ನು ಬಾಯ್ತುಂಬಾ ಹೊಗಳುವದು.

ಶ್ರೀಕಾಂತ— ನನ್ನ ಬಾಳಿನ ಬಿಳೀಕಾಗದಕ್ಕೆ ಕಲಂಕದ ಮಸಿವುಗ್ಗಿ ಬ್ಲಾಟಿಂಗ ಒತ್ತಿದೆಯಲ್ಲಾ, ಆ ಮರ್ಯಾದೆಗೆ ಬೆಂಕಿಹಚ್ಚಿತು ನೀನು ಸಿನಿಮಾ ಪ್ರಪಂಚವನ್ನು ಸೇರುವದು ಬೇಡ ಇದರಂತೆ ಜನತೆ ನನ್ನನ್ನು ಹೊಗಳುವದು ಬೇಡಾ.

ಕುಸುಮ— ಕಲೆಯ ಬೆಲೆ ನಿಮಗೇನು ತಿಳಿಯುವದು ಸುಮ್ಮನಿರಿ.

ಶ್ರೀಕಾಂತ— ಸುಮ್ಮನೆ ಮನೆಯಲ್ಲಿ ಬಿದ್ದಿರು ಏನೋ ಮನಾನಂದ ಕ್ಕಾಗಿ ಕಲಿಯುವಳೆಂದು ನಿನಗೆ ಈ ಕಲೆಗೆ ಆಸ್ಪದಕೊಟ್ಟೆನಲ್ಲದೆ ಪಬ್ಲಿಕ್ ನೃತ್ಯಕಿಯನ್ನಾಗಿ ಮಾಡಲು ಅಲ್ಲ.

ಕುಸುಮ— ಇದು ಸ್ವಾತಂತ್ರ್ಯಯುಗ! ನಾನು ನಿಮ್ಮ ಬೆದರಿಕೆಗೆ ಬೆದರತಕ್ಕವಳಲ್ಲ.

ಶ್ರೀಕಾಂತ— ಏಕೆ ನನಗೆ ತಿರುಗಿ ಮಾತನಾಡುವಷ್ಟು ಧೈರ್ಯ ಬಂದಿತೆ ನಿನಗೆ. ಇದು ನಾನು ನಿನಗೆ ಕೊಟ್ಟ ಸಲುಗೆಯ ಪರಿಣಾಮ.

ಕುಸುಮ— ವಿಶಾಲದೃಷ್ಟಿ, ನಿಚ್ಚಳ ಹೃದಯವಿದ್ದವರು ಈ ರೀತಿ ಸಂಶಯಕ್ಕೆ ಆಸ್ಪದ ಕೊಡಲು ಸಾಧ್ಯವೇ ಇಲ್ಲ.

ಶ್ರೀಕಾಂತ— ಸಾಕು ಸುಮ್ಮನಿರೆ, ಪುಸ್ತಕದೊಳಗಿನ ನಾಲ್ಕು ಅಕ್ಷ ರಗಳನ್ನು ಓದಿಕೊಂಡು ನನಗುಪದೇಶ ಮಾಡಲು ಬರಬೇಡ, ನಾನೆಷ್ಟು ಹೇಳುವೆನು ಅಷ್ಟಕ್ಕೆ ಹೂ ಅನ್ನು.

**ಕುಸುಮ** ಏಕೆ ಹೆಣ್ಣೆಂದರೆ ಕಾರಾಗ್ರುಹದಲ್ಲಿರುವ ಅಪರಾಧಿಯೆಂದು ತಿಳಿದಿರುವಿರೇನು, ಎಷ್ಟು ಆರ್ಡರ ಮಾಡುತ್ತಿರುವಿರಿ.

**ಶ್ರೀಕಾಂತ**— ಮಾಡುತ್ತಿರುವಿರಿಯಂದರೆ, ಮಾಡುವ ಅಧಿಕಾರ ವಿರುವದೆಂದೇ ಮಾಡುತ್ತಿರುವೆನು. ವ್ಹಾ ! ಹೆಣ್ಣೇ, ಕಣ್ಣು ಮೂಗು ಅರಳಿ ಸುವಿಯೇನು ?

**ಕುಸುಮ**— ಇಂಥ ಕಟ್ಟು ಕಟ್ಟಳೆಗಳು, ಹಳ್ಳಿಯ ಹೆಂಗಸರಿಗೆ ! ಸುಧಾರಿಸಿದ ಸ್ತ್ರೀಯರಿಗಲ್ಲಾ. ಸ್ತ್ರೀಯ ಮನದ ಬಯಕೆ ಪೂರ್ಣ ಮಾಡುವ ದಕ್ಕಾಗಿ ಪುರುಷನಿರುವದು.

**ಶ್ರೀಕಾಂತ**— ಹಾ, ಹಾ, ಹೆಣ್ಣೇ, ನನಗೆ ವಕೀಲಿ ಕ್ರಾಸ್ ಹಾಕಿ ಕ್ವೆಶ್ಚೆನ್ ಮಾಡುವಿಯೇನು? ಇನ್ನು ನನ್ನ ಮಾತಿಗೆ ಪ್ರತಿ ಆಡಿದರೆ ನಿನ್ನ ಕಾಲು ಮುರಿದು ಬಿಟ್ಟೇನು !

**ಕುಸುಮ**— (ಅಳುತ್ತ) ನಿಮಗಿಷ್ಟು ಬೇಸರಿಕೆಯಾಗಿದ್ದರೆ, ಹಾಳು ಬಾವಿಯಲ್ಲಿ ದೂಡಿಬಿಡಿ. ನಾನು ನಿಮಗೆಂದು ಪ್ರತಿ ಆಡಿರುವೆನು. ವಿನೋದಕ್ಕಾಗಿ ನಾಲ್ಕು ಮಾತನಾಡಿದರೆ ನನ್ನ ಮೇಲಿಷ್ಟು ಸಿಟ್ಟೆ ನಿಮಗೆ ?

(ಅಳುವಳು)

**ಶ್ರೀಕಾಂತ**— ಆಳಬೇಡ ಬಿಡೇ. ನಾನು ಹಾಗೆ ಮಾತನಾಡಿದೆ, ಇದೋ, ನಾನೇ ಚಹಾ ಮಾಡಿ ತೆಗೆದುಕೊಂಡು ಬರುತ್ತೇನೆ, ನಗೆಮೂಡಲಿ ನಿನ್ನ ಮುಖದಲ್ಲಿ ! (ನಗುವಳು) ಹಾ, ನೀನು ಯಾವಾಗಲೂ ಹೀಗೆ ನಗುತ್ತಿದ್ದರೆ, ನನ್ನ ಜೀವಕ್ಕೆ ಸಮಾಧಾನ ! ರಾಣಿಯವರು ಚಹಾ ತೆಗೆದುಕೊಂಡು ಬರಲಿಕ್ಕೆ ಅಪ್ಪಣೆಯನ್ನು ಕೊಡುವಿರಾ ?

**ಕುಸುಮ**— ನಿಮಗೇಕೆ ಆ ಶ್ರಮಾ, ನಾನೇ ತೆಗೆದುಕೊಂಡು ಬರುತ್ತೇನೆ.

**ಶ್ರೀಕಾಂತ**— ದಿನವೆಲ್ಲಾ ನೀನು ಮಾಡಿ ಕುಡಿಸುವದು ಇದ್ದೇಇದೆ ಇಂದು ನಮ್ಮ ಹಸ್ತದಿಂದ ಚಹಾ ನಮ್ಮ ಬಾಯಿಯಲ್ಲಿ ಬೀಳಲಿ. (ಹೋಗುವನು.)

**ಕುಸುಮ**—ಬಡವನ ರಕ್ತವನ್ನೇ ಹೀರಿ ಗಳಿಸಿದ ಪಿತನ ಸಂಪತ್ತಿನ ಸಿರಿಮಂಚದ ಮೇಲೆ ಲೋಲಾಡುವ ಮುದಿಮಂಗವೇ, ಹೆಣ್ಣೆಂದರೆ ಮೋಹಕ

ಮೂರ್ತಿಯೆಂದು ತಿಳಿದಿರುವ ಮಂಕು ಮಾನವರಿಗೆ ಅರಡಾಳವನ್ನು ಅರಿವುದು ಅಸಾಧ್ಯ ! (ನರೇಂದ್ರ ಓಡಿಬರುವನು.)

**ನರೇಂದ್ರ**— ಕುಸುಮಾ, ಕುಸುಮಾ, ಪೋಲೀಸರು ಬೆನ್ನಟ್ಟಿದ್ದಾರೆ. ಇಲ್ಲಿ ಯಾರೂ ಬಂದಿಲ್ಲವೆಂದು ಹೇಳಿಬಿಡು. (ಅಮರಕಾಂತನು ಕೈಯಲಿ ಪಿಸ್ತೂಲನ್ನು ಹಿಡಿದುಕೊಂಡು ಬರುವನು.)

**ಅಮರಕಾಂತ**— ಮನೆಯಲ್ಲಿ ಯಾರಿರುವಿರಿ ?

**ಕುಸುಮ**— ಕುಳಿತುಕೊಳ್ಳಿ ತಾವೇಕೆ ಈ ಮನೆಗೆ ದಯಮಾಡಿಸಿದಿರಿ. ನಮ್ಮವರನ್ನು ಕಾಣಬೇಕಾಗಿದೆಯೇನು ? (ಕೈಯಲ್ಲಿ ಇಂಗ್ಲೀಷ ಕಾದಂಬರಿ ಹಿಡಿದು ಓದುತ್ತಾ ಬರುವಳು)

**ಅಮರಕಾಂತ**— ಒಂದು ವ್ಯಕ್ತಿಯನ್ನು ಬೆನ್ನಟ್ಟಿ ಬಂದೆ, ಕಳ್ಳಸಾಗಾಟದ ಮಾಲು ಹಸ್ತಗತವಾಯಿತು, ಬೇಟೆ ಕೈ ಜಾರಿತು.

**ಕುಸುಮ**— ಅವನು ಇಲ್ಲಿಗೆ ಬಂದನೆಂದು ಊಹಿಸಿ ಬಂದಿರೋ, ಈ ಮನೆಯಲ್ಲಿರುವವರು ನಾನು ನನ್ನ ಪತಿ, ಇದೇನು ಹಾಗೇ ನಿಂತುಕೊಂಡಿರಲ್ಲಾ ಕುಳಿತುಕೊಳ್ಳಿ.

**ಅಮರಕಾಂತ**— ನಿಮ್ಮ ಪತಿರಾಯರು ಮನೆಯಲ್ಲಿರುವರೇ ?

**ಕುಸುಮ**— ಬರುವ ಹೊತ್ತಾಗಿದೆ.

**ಅಮರಕಾಂತ**— ನಾನು ನಿಮಗೆ ತೊಂದರೆ ಕೊಟ್ಟೆ, ನಾನಿನ್ನು ಬರುವೆ. (ಹೋಗುವನು)

( ಚಪ್ಪಾಳೆ ತಟ್ಟುವಳು ನರೇಂದ್ರ ಬರುವನು )

**ಕುಸುಮ**— ಬೇಟೆಗಾರನು ಹೋಗಿದ್ದರೂ ಎದೆ ಬಡಿತ ಭಯದಿಂದ ನಡುಗು ಹುಟ್ಟಿದಿಯೋ ?

**ನರೇಂದ್ರ**— ನಿನ್ನ ಸಾಹಸದಿಂದಲೇ ನಾನಿಂದು ಉಳಿದದ್ದು

**ಕುಸುಮ**— ಪ್ರಾಣಮೂರ್ತಿಯು ಪ್ರಾಣಾಪಾಯದಿಂದ ಉಳಿದದ್ದು ಪ್ರೇಯಸಿಗೆ ಸಂತಸದ ಸುಗ್ಗಿ.

**ಪದ**— ರಾಗ : ಮಿಶ್ರಮಾಂಡ ತಾಳ : ಕೇರವಾ

ಭಾಮಿನಿ ಮುದಿಸಿಮನಾ । ಕುಸುಮ ಅರಳಿತೆ ಬಾಳಿನ ದಾಭವಿ ॥ ಪ ॥
ಅರಸಿ ರಮಿಸಿ ನಲಿಯೇ । ತಾಸವಿ ರಮಣಿ ಚಿರಸುಖ ಸಾರವಿ ॥ ೧ ॥

(ಹಾಡುತ್ತ ಕುಣಿಯುವಳು. ಚಹಾದ ತಟ್ಟೆ ಹಿಡಿದು ಶ್ರೀಕಾಂತ ಹಿಂದಿನಿಂದ ಬಂದು ನೋಡಿ ತಾನೂ ಕುಣಿಯವನು)

**ಶ್ರೀಕಾಂತ—** ಹಾ ಕುಣಿಕುಣಿ, ಇವಳಿಗೆ ಸಂಗೀತ ನೃತ್ಯವೆಂದರೆ ಬಹು ಆಶೆ, ಇವಳು ಕುಣಿಯುವವಳು ನೀನು ಬಾರಿಸುವವನು, ನಾವು ತಾಳಾ ಹಾಕುವವರು. (ತಾಳಾ ಹಾಕುವನು ನರೇಂದ್ರ ಕುಸುಮ ನಗುವರು)

## ಪ್ರವೇಶ ೨೦. ಜಂಗಲ್ ರಸ್ತಾ

**ಸಮರ್ಥ—** ಬೇಗ ಬೇಗ ನಡಿಯಮ್ಮಾ ಹೊತ್ತಾಗುವದು!

**ನಿರ್ಮಲಾ—** ಸ್ವಾಮಿ ಇಳಿಸಿ, ನನ್ನಿಂದ ಹೊರಲು ಸಾಧ್ಯವಿಲ್ಲಾ.

**ಸಮರ್ಥ—** ( ಇಳಿಸುವನು ) ಏನು ಹಾಗೆಂದರೆ, ನಿನಗೆ ಕೂಲಿ ಯನ್ನೇ ಕೊಡಲಿಕ್ಕಿಲ್ಲಾ ನೋಡು

**ನಿರ್ಮಲಾ—** ಕೊಡದಿದ್ದರೂ ಅಷ್ಟೆ ನನ್ನಿಂದ ಹೊರಲು ಸಾಧ್ಯವಿಲ್ಲ

**ಸಮರ್ಥ—** ಎಂಥಾ ಸಮಯ ಬಂದಿತಪ್ಪಾ, ಅಲ್ಲಿ ಯಾವನೋ ಬರುವ ಹಾಗಿದೆ ಅವನೇನು ಹೌದೋ ಅಲ್ಲೊ (ಅಮರಕಾಂತ ಕೂಲಿವೇಷ ದಲ್ಲಿ ಬರುವನು) ಏ ಕೂಲೀ, ಈ ಟ್ರಂಕನ್ನು ನಮ್ಮ ಬಂಗಲೆಗೆ ತರುವಿಯಾ.

**ಅಮರಕಾಂತ—** ಏಟ ಕೊಡತೀರಿ ಕೂಲಿನಾ.

**ಸಮರ್ಥ—** ಎಂಟಾಣೆ ಕೊಡುತ್ತೇನೆ ತಗೋ.

**ಅಮರಕಾಂತ—** (ಎತ್ತಿ) ಆಬಾಬಾ ಏಟವಜ್ಜ ಐತ್ರಿ ಧಣೇರ ಟರಂಕು.

**ಸಮರ್ಥ—** ಮಗನೆ ಅದರಲ್ಲೇನಿದೆಲೆ ಹೊರುಹೊರು.

**ಅಮರಕಾಂತ—** ನೋಡಾಕ ತಟಗ ಕಂಡ್ರು ಏನ ತುಂಬಿಯೋ ಮಾರಾಯ ಇದರಾಗ ಎಡ್ಡ ರೂಪಾಯಿ ಕೊಟ್ರ ಹೊರತೀನಿ.

**ಸಮರ್ಥ—** ಲೇ, ಏನ ತಿಳಿದಿ ನನ್ನಂದ್ರು ನಿನ್ನ ಏನಬೇಕ ಅದನ್ನ ಮಾಡಿ ಬಿಟ್ಟೇನೂ ಏನಲೆ ಯಾಕಲೆ?

**ಜಮಾದಾರ—** ಏ, ಏನದು ಗಲಾಟೆ.

**ಸಮರ್ಥ—** ಏನಿಲ್ಲ ಸರ್ದಾರರೇ, ಟ್ರಂಕ ಹೊರಲಿಕ್ಕೆ ಹೆಚ್ಚು ಕೂಲಿ ಕೇಳತಾನ.

**ಜಮಾದಾರ—** ಏನಿದೆ ಇದರಲ್ಲಿ

**ಸಮರ್ಥ—** ಏನಿಲ್ಲ ತೊಡುವ ಬಟ್ಟೆ ಇದೆ ಹಣಗಿಕನ್ನಡಿರೇಝುರಸ್ನೊ

**ಅಮರಕಾಂತ—** ಆಟೆದ್ರ ಇಟ್ಯಾಕ ವಜ್ಜ ಇರಾಕ ಹೊದೀತೇಳ್ರಿ.

**ಜಮಾದಾರ—** ತಗೆ ಅದರಲ್ಲೇನಿದೆ.

**ಸಮರ್ಥ—** ನಾನು ಸುಳ್ಳು ಹೇಳುವೆನೇ ನೀವು ನನಗ ಅರಿಯದವರೆ ಹೂ (ಸಮರ್ಥ ಹತ್ತು ರೂಪಾಯಿ ಜಮಾದಾರನ ಕೈಗಿಟ್ಟು)

**ಜಮಾದಾರ** ಉ ಹೂ, ಹೂ (ಮತ್ತೆಹತ್ತುಕೊಟ್ಟು) ಆ (ಮತ್ತೆ ಹತ್ತುಕೊಟ್ಟು) ಏನು (ಮತ್ತೆ ಇಪ್ಪತ್ತು ಕೈಗಿಟ್ಟು ನಮಿಸಿ)

**ಸಮರ್ಥ—** ಈಗ ಇಲ್ಲಾ ಮತ್ತೆ ನೋಡೋಣಾ

**ಜಮಾದಾರ—** ಆಗಲಿ ಬೇಗ ಹೊರಿಸಿಕೊಂಡು ಹೋಗು.

**ಸಮರ್ಥ—** ತಗೆದುಕೋ ಬೇಗ ಹೋಗುವಾ.

**ಅಮರಕಾಂತ** ನೀ ಟೇಶನ್‌ಮನಿಯಿಂದ ಹೊತಗೊಂಡು ಬಂದಿಯೇನವ್ವಾ

**ನಿರ್ಮಲಾ—** ಹೌದೆಪ್ಪಾ,

**ಅಮರಕಾಂತ—** ಕೊಡ್ರಿ ಆಕಿ ಕೂಲಿನಾ, ನಾ ಹೊರತೀನಿ.

**ಸಮರ್ಥ—** ತಗೊ ಎಂಟಾಣೆ. (ನಿರ್ಮಲಾ ತೆಗೆದುಕೊಳ್ಳುವಳು) ನಡಿಯಪ್ಪಾ ಹೋಗುವಾ.

**ಅಮರಕಾಂತ—** ಮತ್ತ ನನ್ನವು ಎಡ್ಡರೂಪಾಯಿ ತರ್ರಿ ಕೂಲಿನಾ.

**ಸಮರ್ಥ—** ಆಗಲಿ, ಮನೆಗೆ ನಡೆ ಕೊಡುತ್ತೇನೆ ಏನಾದರೂ.

**ಅಮರಕಾಂತ—** ಏನಾದ್ರು ಇಲ್ಲಾ ಎಡ್ಡ ಕೊಟ್ರೆ ಹೊರಾಂವ.

**ಜಮಾದಾರ—** ಲೇ, ಏನಾದರೂ ಕೊಡುತ್ತಾರೆ ಹೋಗಲೇ.

**ಅಮರಕಾಂತ**— ನಾ ಹೋಗುದಿಲ್ಲ ಬಿಡ್ರಿ,

**ಜಮಾದಾರ**— ಕತ್ತಿಯ ಮಗನೆ, ನನಗೆ ತಿರುಗಿ ಮಾತನಾಡು ವಿಯಾ? (ಬೆತ್ತದಿಂದ ಹೊಡೆಯುವನು.)

**ಸಮರ್ಥ**— ಈ ಕೂಲಿಸನ ಮಕ್ಕಳಿಗೆ ಬಹಳ ಸೊಕ್ಕು. ಇನ್ನೆರಡೇಟು ಹಾಕ್ರಿ. (ತಾನು ಹೊಡೆಯುವನು, ಜಮಾದಾರ ಬೆತ್ತದಿಂದ ಹೊಡೆಯುವಾಗ ಅಮರಕಾಂತನು ಗಡ್ಡ ಮೀಸೆ ಕಿತ್ತೊಗೆದು)

**ಅಮರಕಾಂತ**— ಜಮಾದಾರ!

**ಜಮಾದಾರ**— ಎಸ್. ಸಾರ್. (ಶಲೀಟ ಹೊಡೆದು ನಿಲ್ಲುವನು)

**ಅಮರಕಾಂತ**— ಪೋಲೀಸ ಖಾತೆಯಂದರೆ, ಕೇವಲ ಲಂಚಗುಳಿತನಕ್ಕೆ ಬಾಯೊಡ್ಡಿ ನಿಂತಿರುವ ಹೇಯ ನೌಕರಿಯೆಂದು ತಿಳಿದಿಯಾ? ದೇಶದ ಹಿತಕ್ಕೆ ದ್ರೋಹಕರವಾದ ಶಕ್ತಿಯನ್ನು ನಾಶ ಮಾಡುವದಕ್ಕೆ, ಜನತಾಹಿತ ಸಂರಕ್ಷಕ ರಾಜ್ಯದಲ್ಲಿ ಪೋಲೀಸಪಡೆಯ ಪಾತ್ರ ಅವಶ್ಯವಾದದ್ದು. ಅದರ ಇಂಗಿತವ ತಿಳಿದು, ನಿಃಸ್ವಾರ್ಥದಿಂದ ದುಡಿದು, ಸರಕಾರಕ್ಕೆ ಗೌರವ ತರುವವನೇ ನಿಜವಾದ ಅಧಿಕಾರಿ. ದೇಶಕ್ಕೆ ಹಿತಕಾರಿ.

**ಸಮರ್ಥ**— ಸರಕಾರ! (ಕೈ ಮುಗಿಯುವನು.)

**ಅಮರಕಾಂತ**— ಬದ್ಮಾಷ್ ನಿನ್ನಂಥವನಿಂದ ನೌಕರರ ಮುಖಕ್ಕೆ ಕಪ್ಪುಹತ್ತುವದಲ್ಲದೆ, ಗೌರವ ದೊರೆಯುವದೆ! ರಾಜ್ಯದ ಭದ್ರತೆಯನ್ನು ಆಧಾರಸ್ತಂಭದಂತಿರುವ ಪೋಲೀಸದಳದ ಬಲದಿಂದಲೇ ರಜವಿಯ ಕಾರಸ್ಥಾನದ ಕಟ್ಟಡವನ್ನೊಡೆದು, ಅವ್ಯಾಹತವಾಗಿ ಕೊಲೆ-ಸುಲಿಗೆ ನಡೆಸಿದ, ರಜಾಕಾರರನ್ನು ಒದ್ದೋಡಿಸಿ, ಭಾಗ್ಯನಗರದ ಮೇಲೆ, ಹೈದ್ರಾಬಾದ ನವಾಬನ ಮಂದಿರಮೇಲೆ ತ್ರಿವರ್ಣ ರಾಷ್ಟ್ರಧ್ವಜವನ್ನು ಹಾರಿಸಿದ ಶ್ರೇಯಸ್ಸು, ಪವಿತ್ರವಾದ ಪೋಲೀಸ ಪಡೆಗಿದೆ! ಶ್ರೀಮಂತರೇ, ಇಂಥವರು ನಿಮಗೆ ಸಹಾಯಕರಾಗುವದರಿಂದ, ಬೇಕು ಬೇಕಾದಂತೆ ಕಳ್ಳಪೇಟೆಯ ವ್ಯವಹಾರ ಮಾಡಲು ನಿಮಗೆ ಅನುವು ದೊರತಿದೆ. ಬಡಜನತೆಗೆ ಹಿತವ ಬಯಸಿ ಹಾರೈಸಿರಿ ದೇಶದೇಳಿಗೆಯನ್ನು. ನಡೆ, ಟ್ರೆಂಕು ತೆಗೆದುಕೊಂಡು ಹೋಗು.

( ಸಮರ್ಥ ಟ್ರಿಂಕು ಹೊತ್ತುಕೊಂಡು ಕೈಯಲ್ಲಿ ಬ್ರಾಂಡಿ ಬಾಟ್ಲಿ ಹಿಡಿದು ಅಳುತ್ತ ಹೋಗುವನು.) ಜಮಾದಾರ, ಇದೊಮ್ಮೆ ಕ್ಷಮಿಸಿದ್ದೇನೆ ಹೋಗು.

**ಜಮಾದಾರ—** ಆಗಲಿ ಸಾರ್ (ಶಿಲೇಟ ಹೊಡೆದು ಹೋಗುವನು)

**ನಿರ್ಮಲಾ—** (ಅಮರಕಾಂತ ನೋಡಿ ಹೋಗುವಾಗ) ಮಗೂ, ಮಗೂ.

**ಅಮರಕಾಂತ—** ಆರಿವಳು ಹುಚ್ಚಿ ಮಗನೆಂದು ಸಂಬೋಧಿಸುತ್ತಿರುವಳು. ಬಾ ತಾಯಿ ನಿನಗೇನು ಬೇಕಾಗಿತ್ತು.

**ನಿರ್ಮಲಾ—** ಏನಿಲ್ಲಾ ತಾಯಿ ಮಗನಿಂದೇನು ಬೇಡುವಳು ಈ ವಿಕಾರರೂಪ, ಈ ಭಿಕಾರಿಣಿ, ನಿನ್ನ ತಾಯಿಯನ್ನಲು ನಿನ್ನ ಮನ ಒಪ್ಪದು. ನಾನು ನಿನ್ನ ತಾಯಿ, ಈ ಕ್ರೂರ ಕರ್ಮಿಗೆ ನಿನ್ನ ತಾಯಿಯನ್ನಲು ಬಾಯಿಯು ಇಲ್ಲಾ. (ಅಳುವಳು)

**ಅಮರಕಾಂತ—** ನಿನ್ನ ಮಗನು ನನ್ನಂತೆ ಇದ್ದನೇ ತಾಯಿ ?

**ನಿರ್ಮಲಾ—** ಅಹುದಹುದು, ನಿನ್ನಂತೆ ಒಬ್ಬನೇ ಒಬ್ಬ ನನ್ನ ವಂಶಕ್ಕೆ ಈ ಮಾನವತೆಯ ಮನೆಗೆ ಬೆಳಕು ತರುವ ವಂಶ ವೃದ್ಧಿಯ ಅಮರ ನಂದಾದೀಪ. ಆದರೆ !

**ಅಮರಕಾಂತ—** ಅದೀಗ ನಂದಿರುವದೇ ನಿನ್ನ ಪಾಲಿಗೆ.

**ನಿರ್ಮಲಾ—** ಇಲ್ಲಿಲ್ಲಾ ಅಮರ ಕೀರ್ತಿಯಲ್ಲಿ ಬೆಳಗುತ್ತಿದೆ ಜಗಕೆ ಕಣ್ಮಣಿಯಾಗಿ.

**ಅಮರಕಾಂತ—** ಯೇನೇ ನಿನ್ನ ಬಡಬಡಿಕೆ ತೆಗೆದುಕೋ, ಎರಡು ರೂಪಾಯಿ ಏನಾದರೂ ಕೊಂಡುಕೊಳ್ಳಮ್ಮಾ.

**ನಿರ್ಮಲಾ—** ಆಡಿಸಿ ಬೆಳಿಸದ ಬಿಡಿ ಕಾಸು ಕೊಟ್ಟು ಗುಟುಕು ಹಾಲು ಹಾಕಲಾರದ ಈ ಕರ್ಮ ಚಾಂಡಾಲಿನಿಗೆ ಕೈ ಎತ್ತಿ ನೀಡಿದಿ. ಏನಾದರೂ ಕೊಂಡುಕೊಳ್ಳಮ್ಮಾ ಎಂದು. ನೀನು ಉದಾರಿ ನಾನು ಮಗುವನು ಪಾಲನೆ ಗೈಯ್ಯಲಾರದ ಮಾರಿ.

**ರೇಣುಕೆ—** ಮಗೂ !

**ಅಮರಕಾಂತ—** ತಾಯಿ, ಎತ್ತ ಹೊರಟಿದ್ದೀಯಮ್ಮಾ.

**ರೇಣುಕ—** ನಿಮ್ಮ ಗುರೂಜಿಯ ಕಾಣಲು ಹೊರಟಿದ್ದೆ ಇವಳಾರು?

**ಅಮರಕಾಂತ—** ಅವಳೋ ಭಿಕಾರಿ! ತಾಯಿ ಮಕ್ಕಳನ್ನು ಹಡೆಯುವದೇತಕ್ಕೆ?

**ರೇಣುಕ—** ಇದಕ್ಕೆ ಉತ್ತರ ಕಲಿತವನಾದ ನಿನಗೆ ನಾನು ಹೇಳಲಿ? ಅದು ತಾಯಿಯ ಹೆಬ್ಬಯಕೆ.

**ಅಮರಕಾಂತ—** ಬಯಸಿ ಹಡೆದ ತಾಯಿ ಮಕ್ಕಳನ್ನು ಮಮತೆ ಇಲ್ಲದೇ ಕಾಲ್ಕಸವಾಗಿ ಚಲ್ಲಿ ಹೋದರೆ ಅಂಥವಳಿಗೆ ತ್ಥಾಯಿ ಎನ್ನಬಹುದೇ?

**ರೇಣುಕ—** ಅಂಥವಳು ತಾಯಿಯಲ್ಲಾ ನಿರ್ದಯ ರಾಕ್ಷಸಿ.

**ನಿರ್ಮಲಾ—** ಓಗೊಡದೆ ಏಕೆ ನಿಂತೆ? ಕಟ್ಟು ಮನದ ನಿರ್ಮಲಾ, ಮಗುವನ್ನು ಮಂದಿಯ ಪಾಲು ಮಾಡಿ ತಾಯ್ತನ ಕಳೆದುಕೊಂಡ ನಿನ್ನ ಬಾಯಿ ನುಡಿಸದು, ನಾನು ನಿನ್ನ ತಾಯಿಯಂದು (ಅಳುವಳು) (ಅವದೋ ಸ್ಮರಣೆಗೆ ವಿಚಾರವು ಮನವು ಎಳೆದೊಯ್ಯುತಿದೆ, ನಿಲುಕಲಾರದ ವಿಮರ್ಶೆಯ ಬಿಡಿಸಲು)

**ರೇಣುಕಾ—** ಮಗು, ಅಮರಕಾಂತಾ ಈಗೇಕೆ ಈ ವಿಚಾರವನೆತ್ತಿದೆ?

**ಅಮರಕಾಂತ—** ಅವದೋ ಸ್ಮರಣೆಗೆ ಮನವು ಎಳೆದೊಯ್ಯುತ್ತಿದೆ, ನಿಲುಕಲಾರದ ವಿಚಾರಕ್ಕೆ ಬರುವೆ, ನಮ್ಮ ಕೆಲಸ ಏದೆ.

**ರೇಣುಕಾ—** ನೀನು ಯಾರಮ್ಮಾ ಬೀದಿಯಲ್ಲಿ ಅಳುತ್ತ ನಿಂತಿರುವಿ ಏಕೆ ತಾಯಿ.

**ನಿರ್ಮಲಾ—** ಹಾ ಮತ್ತೆ ಬಂದಿತು ನನ್ನ ಮಗು, ಬಾ ಮಗು ತೆಗೆದುಕೊ ರೂಪಾಯಿ.

**ರೇಣುಕಾ—** ತಾಯಿ ಏನಿದು ಹುಚ್ಚಾಟಾ, ಏನಿದು ನಿನ್ನ ಆ ತಾಪಾ, ನಿನ್ನದೀ ಸ್ಥಿತಿಯನ್ನು ಕಂಡು ಹೆಣ್ಣಾದ ನನ್ನ ಮನ ಮರಗುತಿದೆ ತಾಯಿ.

**ನಿರ್ಮಲಾ—** ಅಲ್ಲ ನಾನು ತಾಯಿಯಲ್ಲಾ, ಆ ಮಮತೆಯ ಪವಿತ್ರ ಶಬ್ದ ನನ್ನಂಥ ನಿರ್ದಯಳಿಗಲ್ಲಾ ನೀನು ತ್ಥಾಯಿ ನಾನು ನಾಯಿ. (ಅಳುವಳು)

ರೇಣುಕಾ— ಅವ್ಮಾ ಅಂತಹ ಪವಿತ್ರಶಬ್ದ ಹರಿಜನಳಾದ ನನಗೇಕೆ

ನಿರ್ಮಲಾ— ಅನ್ನದಿರಮ್ಮ ಹಾಗೆ ನಾನೂ ಹರಿಜನಳು.

ರೇಣುಕಾ— ತಾಯಿ ಈ ನಿನ್ನ ವಿಕಾರರೂಪಕ್ಕೆ ಕಾರಣವೇನು ?

ನಿರ್ಮಲಾ— ಅದು ಬಹು ರಹಸ್ಯವಾಗಿದೆ ಅದನ್ನು ಹಾಗೆ ಹೇಳಲು ಬರುವದಿಲ್ಲ ಅದಕ್ಕಾಗಿ ಕಾಲಕಾದಿದೆ ( ನರೇಂದ್ರ ಬಾದು ಹೋಗುವವನು ನೋಡಿ ) ನನ್ನ ಪದೇದೇವ ಹೋಗುತ್ತಿರುವನು, ಬರುವೆನವ್ಮಾ ನನಗಾಗಿ ಕಾರ್ಯಗಳು ಕಾದಿವೆ (ಹೋಗುವಳು)

ರೇಣುಕಾ— ಮಗನಾರು ಗಂಡನಾರು, ತನ್ನ ಹಿಂದಿನ ಚರಿತ್ರೆಯನ್ನು ನೆನೆದು ಹುಚ್ಚಿಯಂತೆ ಬಡಬಡಿಸುತ್ತಿರುವಳು. ಈ ರೂಪವನ್ನು ಇವಳು ಹೊಂದಬೇಕಾದರೆ ಆ ಕರ್ಮಕ್ಕೆ ಕೈನೀಡಿರಬೇಕು. ಜಗದ್ರಂಗದಲ್ಲಿ ಜರುಗಿ ಹೋಗುವ ಒಂದೊಂದು ವೇಷಗಳು ಸುತ್ತುತಿಹ ಕರ್ಮದ ಪಾಶಗಳು (ಹೋಗುವಳು)

## ಪ್ರವೇಶ ೨೧. ಯಮುನವ್ವನ ಮನೆ



( ಕನಕಿ ಎಲಿಅಡಿಕಿ ಕೊಡುವಳು. ಹಾಕುತ್ತ ಬರುವನು ಚಿಂತಾಮಣಿ ಡೇಗುತ್ತ)

ಚಿಂತಾಮಣಿ— ಅಂತು ನಿನ್ನ ಗಂಡನಿಗೆ ತಕ್ಕ ಪ್ರಾಯಶ್ಚಿತ್ತವಾಯಿತು. ಅವನಿಗೆ ಮಾಟಾಮಾಡಿಸಿದ್ದರಿಂದ ಅವನ ತಲೆ ಸ್ವಾಧೀನವಿಲ್ಲಾ, ನಾಲ್ಕು ದಿನ ಸರಿಯಾಗಿ ಕೆಲಸ ಮಾಡಿದರೆ ಮತ್ತೆ ನಾಲ್ಕು ದಿನ ಬಡಬಡಿಸುತ್ತ ತಿರುಗುತ್ತಿರುವನು ಇನ್ನು ಅವನು ನಿಮ್ಮ ಮನೆಯನ್ನು ಸೇರುವದಿಲ್ಲ.

ಕನಕಿ— ಮನಸ್ಸ ಕೂಡಿದ ಕೆಲ್ಸಾ ಏನರ ಮಾಡಾಕ ಹಚ್ಚತೈತೆ, ಇಂತಾವು ಎಟನಡಿತಾವು ಈ ಕಲಿಯುಗದೊಳಗ. ಅವನು ಸಾಯಂತಾ ಪುಡಿ ತಂದಕೊಟ್ಟಿದ್ರ ನಾನೇನು ಬಿಡಮಗಳಲ್ಲ ನಿನ್ನ ಸಲುವಾಗಿ ಗಂಡಗ ಹಾಕಿ ಬಿಡತ್ತಿದ್ದೆ.

**ಚಿಂತಾಮಣಿ**— ಬೇಷ್ ನಿಜವಾದ ಪತಿವೃತೆಯನ್ನಬೇಕು ನಿನಗೆ. ಇಂದು ನನ್ನ ಮೇಲಿನ ಪ್ರೇಮದಿಂದ ಗಂಡನ ತಲೆ ಕೆಡಿಸಿ ಕೈಬಿಟ್ಟ ಇವಳು ನಾಳೆ ಮತ್ತೊಬ್ಬನಾಶೆಯಿಂದ ನಮ್ಮನ್ನು ಸ್ಮಶಾನ ಹಾದಿ ಹಿಡಿಸುವದೇ ಖಂಡಿತ. ನಾನು ಬರಲೇ !

**ಕನಕಿ**— ಉಂ, ಹೋಗ. ನಿನ್ನ ಮಕಾ ನೋಡ್ಲಿದ್ರ ಜೀವಕ್ಕ ಸಮಾದಾನಿಲ್ಲಾ. ಹಿಂದಿನ ಜನಮದಾಗ ಉಳಕೊಂಡ ಋಣ ಈ ಜನ್ಮದಾಗ ಕೂಡಿಕೊಂಡೈತಿ.

**ಚಿಂತಾಮಣಿ**— ಅಂತೇ ಕೈಹಿದ ಗಂಡನಿಗೆ ಕೈಕೊಟ್ಟು, ನನ್ನನ್ನು ಕೂಡಿಕೊಂಡಿ.

**ಕನಕಿ**— ಯಾರ ಕೈಯಾಗ ಏನೈತಿ. ಹಣಿ ಪರಿಯಾಣದಾಗ ಇದಿ ಮುಂಡಿ ಹೆಂಗ ಬರದಿರತಾಳಾ ಹಂಗ ನಡಿತೈತಿ. ಎಂದು ನಿನ್ನ ನೋಡಿದ್ದೆ, ಅಂದ ಗಂಡನಮನಿ ಬಿಟ್ಟು ತಾಯಿ ಮನೆ ಹೊಕ್ಕೆ.

**ಚಿಂತಾಮಣಿ**— ಈಗ ಎಲ್ಲಿ ನೋಡಿದರೂ ಗಂಡನ ಮನೆ ಬಿಟ್ಟು, ತಾಯಿ ಮನೆ ಸೇರುವ ಹೆಣ್ಣುಗಳು ಬಹಳಾಗಿವೆ. ಮಕ್ಕಳ ಸ್ವಾತಂತ್ರ್ಯತೆಯನ್ನು ಕಣ್ತುಂಬನೋಡುವ ಇಚ್ಛೆಯು ಈಗಿನ ತಂದೆತಾಯಿಗಳಿಗೆ ವಿಶೇಷ

**ಕನಕಿ**— ಏನ ಅಂತೀರಲ್ರೀ, ನೀನು.

**ಚಿಂತಾಮಣಿ**— ಹೇ ವಿಶಾಲಾಕ್ಷಿ, ಮಮಕಾಸಾರ ಹೃದಯಪಕ್ಷಿ, ನನ್ನ ನಿನ್ನ ಪ್ರೇಮ ಆ ದೇವನಿಗೆ ಸಾಕ್ಷಿ ಕನಕಿ! (ಅಪ್ಪಿಕೊಳ್ಳಲು ಹೋಗುವನು ಕಲ್ಯಾ ಬರುವನು.)

**ಕಲ್ಲಪ್ಪ ಪದ:**

ನೆಚ್ಚಿನವಳು ಇವಳೆಂದು ಮತ್ತೆ ಮನಬಿಚ್ಚಿ ನುಡಿದು ನೀ ಕೆಡಬೇಡಾ।
ಹುಚ್ಚುಹಿಡಿಸುವಳು ಎಚ್ಚರಾಗಬೇಕು। ಹುಚ್ಚುಮಾಯೆ ನಂಬುಬೇಡಾ।
ಗಂಡನಬಿಟ್ಟು ಭಂಡನನೆಚ್ಚಿ ತಲೆಯ ಕೆಡಿಸುವಳು ಈ ಮಾಯೆ ॥ ೧ ॥

**ಲಾವಣಿ**— ರಾಗ: ದುರ್ಗಾ, ತಾಳ: ಕೇರವಾ

ಕ್ಯಾ ಹೆದರಬ್ಯಾಡ್ರಿ। ಬೆದರಬ್ಯಾಡ್ರಿ ಹೆಂಗ ಕೂಡಿರಿ ಹಂಗ ನಿಲ್ರಿ। ಕೂಡಿದ ಜೋಡಿ ಅಗಲಿಸಬಾರ್ದು। ಗಂಡಹೆಂಡರ ಬಾಳೇವು ಕೆಡಸಬಾರ್ದು। ಯಾವ

ಹಂಗ ಮಾಡತಾನೋ ! ಅವಾ ! ಮುಂದಿನ ಜನ್ಮದಾಗ ನರಕದ ಹಂದಿ ಯಾಗಿ ಹುಟ್ಟತಾನ ! ಇದು ಶಿವಸಾಕ್ಷಿ ಮಾತು !!

**ಕನಕಿ**— ಐ, ಇದು ಮತ್ಯಾಕ ಬಂತ ಎವ್ವಾ.

**ಕಲ್ಲಪ್ಪ**— ಈ ದೆವ್ವಾ, ನೀವು ಸತ್ರೂ ನಿಮ್ಮನ್ನ ಬಿಡೂದಿಲ್ಲಯವ್ವಾ, ಯಾಕಪಾ ಎಂಣಾ !

**ಚಿಂತಾಮಣಿ**— ನಮಗೇನ ತಿಳಿಬೇಕಪ್ಪಾ ಇದರಾಗ.

**ಕಲ್ಲಪ್ಪ**— ಹ್ಯಾಂಗ ತಿಳದೀತಪ್ಪಾ ಗಂಡ ಹೇಣ್ತಿ ಹಕ್ಕ ಬಿಡಿಸಿ ಈ ಹಕ್ಕಿ ಹುಡಕಬೇಕಾದ್ರ ನೀ ಎಂತಾ ಪಕ್ಕಾ.

**ಚಿಂತಾಮಣಿ**— ಸಿಕ್ಕುಬಿದ್ದೆನಲ್ಲಾ ಇವನ ಕೈಯಲ್ಲಿ?

**ಕಲ್ಲಪ್ಪ**— ಹೋಗುವದಿನ್ನೆಲ್ಲಿ, ಆ ಯಮನಲ್ಲಿ ಇಂದಿಗೆ ನಿನ್ನ ದಿನ ಮುಗಿಯಿತಿಲ್ಲಿ.

**ಕನಕಿ**— ತಲಿ ಕೆಟ್ಟೈತಿದಕ್ಕಾ ಚಂಡ ಹಿಡದ ನೂಕು ಹೊರಾಕ.

**ಕಲ್ಲಪ್ಪ**— ಭಲೇ (ಕನಕಿ ಓಡಿ ಹೋಗುವಳು) ಚಂಡ ಹಿಡದ ನಿಮ್ಮೆಲ್ಲಾರ್ನು ಒದ್ದು ಹೊರಗ ಹಾಕಾಕ ಬಂದೀನಲೇ. ಆಹಾಹಾ ರುದ್ರಾ ಎದುರಾಗಲೇ ಭಲಾ ಭದ್ರಾ (ತೋಳೇರಿಸಿ ಮುಂದೆ ಹೋಗುವದರೊಳಗೆ ಕನಕಿ ಹಿಂದಿನಿಂದ ಬಡಿಗಿಲೆ ಹೊಡೆಯುವಳು ಕಲ್ಲ್ಯಾ ಬೀಳುವನು)

**ಚಿಂತಾಮಣಿ**— ಹ್ಯಾಂಗೈತೋ ಮಗನೇ (ಚಿಂತಾಮಣಿ ಮೀಸಿ ತಿರುವುವನು ತೆರೆ ಬೀಳುವದು)

## ಪ್ರವೇಶ ೨೨. ರಸ್ತಾ



( ನರೇಂದ್ರ ಅಮರಕಾಂತ )

**ಅಮರಕಾಂತ**— ನರೇಂದ್ರಾ ನಿಮ್ಮನ್ನು ಕಾಣಬೇಕೆಂದರೆ, ಸಮಯ ದೊರೆಯದಾಯಿತು. ಕಳ್ಳ ಪೇಟೆಯ ಕಳ್ಳರನ್ನು ಹಿಡಿಯುವ ಪ್ರಯತ್ನದಲ್ಲಿ ತೊಡಗಿದ್ದರಿಂದ.

**ನರೇಂದ್ರ**— ನಿಜ ರಾವಸಾಹೇಬ, ಸ್ವಾತಂತ್ರ ದಿನವು ಬಂದರೂ ಜನತೆಗೆ ಜಾಗೃತಿ ಬಾರದಾಗಿದೆ. ನಮ್ಮ ದೇಶ, ನಮ್ಮ ಜನರೆಂಬ ಅರಿವಿಲ್ಲ. ಕಳ್ಳ ಪೇಟೆಯಲ್ಲಿ ಎಷ್ಟು ಶ್ರಮಪಟ್ಟು ದುಡಿದರೂ ಒಂದಿಲ್ಲ ಒಂದು ದಿನ ಆ ಹಣ ಸರಕಾರದವರ ಪಾಲಿಗೆ ತೆಗೆದಿಟ್ಟ ಮುಡುಪು.

**ಅಮರಕಾಂತ**— ಮೊನ್ನೆ ಇಲ್ಲಿಯ ಒಂದು ವ್ಯಕ್ತಿ ನನ್ನ ಕೈಯಲ್ಲಿ ಸಿಕ್ಕು ತಪ್ಪಿಸಿಕೊಂಡನು. ಆವನ ಮುಖ ಪರಿಚಯ ನನಗೆ ಹತ್ತಲಿಲ್ಲಾ, ಎಲ್ಲಿ ಅಡಗಿದನೆಂಬ ಸುಳುವು ಸಿಕ್ಕಲಿಲ್ಲಾ.

**ನರೇಂದ್ರ**— ಆವನು ಸಾಗಿಸುತ್ತಿದ್ದ ಮಾಲು ?

**ಅಮರಕಾಂತ**— ಹಸ್ತಗತವಾಯಿತು, ನನ್ನ ಪ್ರಯತ್ನ ನಿಷ್ಫಲ ವಾಯಿತು.

**ನರೇಂದ್ರ**— ಆವನಾವನು ಅಂಥಾ ಗಂಡು ಗುಂಡಿಗೆಯವನು ?

**ಅಮರಕಾಂತ**— ಅದಕ್ಕಾಗಿ ಬಡವರ ಬಗ್ಗೆ ಕಳಕಳಿಯುಳ್ಳ ಸಾರ್ವಜನಸೇವಾಧುರೀಣರಾದ ತಮ್ಮಿಂದ ಆವನ ವಿಷಯ ತಿಳಿಯಬಹುದೆಂದು

**ನರೇಂದ್ರ**—ನಾನಂತೂ ಅಂಥವರುಗಳಿಗೆ ಸೋಂಕದವನು ಒಂದೆ ಒಡಹುಟ್ಟಿದ ಅಣ್ಣ-ತಮ್ಮಂದಿರಂತಿರುವ ಈ ವಿಶಾಲ ಭಾರತದಲ್ಲಿ ದ್ವೇಷ-ಸ್ವಾರ್ಥಿಗಳ ವಿಷವಾಯುವು ಉಸಿರಾಡಿಸಿದರೆ, ನಿಸ್ವಾರ್ಥದ ಸಮತೆಯಲ್ಲಿ ಸುರಾಜ್ಯದ ನೆಲೆಯಲ್ಲಿ, ಶಾಂತಿಯ ಮೂಲವೆಲ್ಲಿ ಇದನ್ನು ನೋಡಲಾರದೆ ಕಣ್ಮರೆಯಾದನು ಮಹಾತ್ಮಾ ಗಾಂಧೀಜಿ.

**ಅಮರಕಾಂತ**— ನಿಮ್ಮ ಉದ್ಗಾರವನ್ನು ಕೇಳಿ ಮನಕ್ಕೆ ಆನಂದ ವಾಯಿತು.

**ನರೇಂದ್ರ**— ನನಗೆ ಅನ್ಯಾಯವೆಂದರೆ ಸೇರದು, ಯಾವಾಗಲೂ ನನ್ನದು ಸ್ಪಷ್ಟೋಕ್ತಿ.

**ಅಮರಕಾಂತ**— ಐಸೀ, ನಿಮ್ಮಂಥಾ ಸುಧಾರಕರು ಬೇಕೆಬೇಕು. ಈ ಪ್ರಜಾಪ್ರಭುತ್ವದಲ್ಲಿ ಜನತೆಯನ್ನು ಜಾಗ್ರುತ ಗೊಳಿಸಲು.

**ನರೇಂದ್ರ**— ಈಗಿನ ಮಂತ್ರಿಮಂಡಲದಲ್ಲಿ ಅಧಿಕಾರಿ ವರ್ಗದಲ್ಲಿ ಸಾರ್ವಜನಿಕ ಮುಂದಾಳುಗಳಲ್ಲಿ ನಮಂಥಾ ನಿಸ್ವಾರ್ಥಪರರು ತುಂಬಿರುವರು

ಅಮರಕಾಂತ— ಸತ್ಯವಿದೆ. ನೀವು ನನಗೆ ನೆರುವಾದರೆ ಆ ಬಡಾ ಷನನ್ನು ಬಂಧಿಸಲು ದಿನಗಳಿಯಬೇಕಾಗಿಲ್ಲ, ಅವನಿಗಾಗಿ ಪ್ರತಿದಿನ ಗಸ್ತಿ ತಿರುಗುತ್ತಿರುವೆ ಅವನನ್ನು ಬಂಧಿಸದೇ ನನ್ನ ಮನಕ್ಕೆ ಶಾಂತಿಯಿಲ್ಲ.

ನರೇಂದ್ರ— ಅಂಥವರಿಗೆ ತಕ್ಕಸಿಕ್ಷೆಯಾಗಬೇಕು ರಾವಸಾಹೇಬ ನೀವು ಪ್ರತಿದಿನ ಗಸ್ತಿಯಲ್ಲಿದ್ದರೆ ನಾನು ಪ್ರಯತ್ನಪಟ್ಟು ಅವನನ್ನು ಹಿಡಿದು ಕೊಡುತ್ತೇನೆ.

ಅಮರಕಾಂತ— ನಾನು ಬರುವೆ ಮತ್ತೆ ತಮ್ಮನ್ನು ಕಾಣುವೆ

ನರೇಂದ್ರ— ನಾನೇ ತಮ್ಮನ್ನು ಕಾಣುವೆ.

ಅಮರಕಾಂತ— ಇಂದು ಸಾಯಂಕಾಲಕ್ಕೆ ಬರುವಿರಾ

ನರೇಂದ್ರ— ಅಗತ್ಯವಾಗಿ, ನಮಸ್ತೆ

ಅಮರಕಾಂತ— ನಮಸ್ತೆ!

ನರೇಂದ್ರ— ಸಿರಿಭಾಗ್ಯ ಸೊಗವೆಲ್ಲ ಸರಿದು ಶೂನ್ಯವಾಗಿದೆ ಎನ್ನ ಜೀವನಕೆ ಜಗ. ಅಡಿಗಡಿಗೆ ವಿಘ್ನಗಳ ಕಾಲ್ತೊಡಕಿಗೆ ಮುಗ್ಗರಿಸಿ ಬಿದ್ದೆದ್ದು, ಬಟ್ಟೆಗೆಟ್ಟಿರುವೆ ಮುಂಗಾಣದೆ! ಗಂಡು ಗುಂಡಿಗೆ ಅವನದು, ಅಮರಕಾಂತ ನದು! ನನ್ನ ಬೆಂಬತ್ತಿ ತಿರುಗುತಿರುವನು ಬಂಧಿಸಲು. ನನ್ನ ಈ ವೇಷದ ಹುರುಳನ್ನು ಬೈಲಿಗೆಳೆಯಲು. ಹೀಗಾದರೆ ಮುಂದೇನು? ಕುಸುಮಾ, ಅದೊಂದು ಮಾಯದ ಮುದ್ದಿ! ಅದಕೆ ಲುಬ್ಧನಾದರೆ, ಸಿದ್ಧಿಸದು ನನ್ನ ಕಾರ್ಯ! ಅವಳೆನ್ನ ಕೈಗೊಂಬೆ, ಇಚ್ಛಿತವು ಪೂರ್ಣವಾದೊಡೆ, ಬಿಸುಟು ವೆನು ಬೆಂಕಿಯಲಿ! ಶ್ರೀಕಾಂತಾ, (ನಕ್ಕು) ಎಲೆ ರಜನಿ, ನಿನ್ನ ಕರಿಗಲ್ಲದ ಮೇಲೆ ಅರುಣನ ರಶ್ಮಿ ಚಿಮ್ಮುವದರೊಳಗಾಗಿ ಕಣ್ಮುಚ್ಚಲಿವೆ ಎರಡು ದೇಹ ಗಳು. (ನಗುತ್ತ ಹೋಗುವನು. ನಿರ್ಮಲಾ ಬರುವಳು.)

ನಿರ್ಮಲಾ— ರಕ್ತರಜನಿಯನೆ ಮುದ್ದಿಸಲು, ಕರವಾಲವನೆ ಪಿಡಿದು ಹಂತಕನಾಗಿ ನುಗ್ಗಿ ನಡೆದಿಹನು ಎನ್ನ ಸೌಭಾಗ್ಯದಾತ! ಕರ್ಮವು ಬೆಳೆದು ನಭಕೆ ತಲೆಚಾಚಿದೆ ವಾರಿಜಾಪತಿಯ ಕರುಣೆ ಸರಿದುದಕೆ! ಭ್ರಮೆಯಿಂದ ಮತ್ತನಾಗಿ ಮುಂಗಾಣದೆ ಮಂಜುಗವಿದಿದೆ ಸಾಹಸೀ ಯೋಧನ ಬುದ್ಧಿಗೆ! ಉರಿದುರಿದು ಹಣತಿ ಮಂದವಾಗಲಿದೆ ಪುಣ್ಯದೆಣ್ಣೆ ತೀರುತ್ತಿರುವದರಿಂದ!

ನರೇಂದ್ರ, ನಿನ್ನ ನಾಮಕ್ಕೆ ಈ ದೇಹವನ್ನು ಮುಡುಪಿಟ್ಟ, ನಿನ್ನ ಚರಣಧೂಲಿಯನ್ನೇ ಈ ಫಣೆಗೆ ತಿಲಕವಾಗಿಟ್ಟು ನಡೆದ ಈ ನಿರ್ಮಲೆಯು, ಈ ಮಾನವತಿಯು, ತನ್ನ ರಕ್ತತೈಲವನ್ನೇಹಣಿಸಿ ಹಣತಿಯನ್ನೇ ಉರಿಸಲಿಹಳು ಮಾನವತಿಯ ಶೀಲದಮನೆ ಬೆಳಕಿನಲಿ! ಈ ದುರ್ಘಟನೆಯನ್ನು ಚೀಟಿ ಮುಖಾಂತರ ಅಶೋಕನಿಗೆ ತಿಳುಹಿಸಿ, ಬರಮಾಡಿಕೊಳ್ಳುವೆ ಶ್ರೀಕಾಂತನ ಮನೆಗೆ!

## ಪ್ರವೇಶ ೨೩. ಶ್ರೀಕಾಂತನ ಬಂಗ್ಲೆ

(ರಾತ್ರಿ ಪಲ್ಲಂಗದ ಮೇಲೆ ಕುಸುಮ ಓದುತ್ತ ಮಲಗಿರುವಳು)

**ಕುಸುಮ**— ವಿಶ್ವವನೇ ಬಂಧಿಸಿದ ಅಮರ ಪ್ರೇಮಾ, ಒಂದೇ ವಯಸ್ಕರಾದ ನೀರನೀರೆಯರ ಒಳದನಿಯ ಪ್ರೇಮ ಗೀತೆಯಿಂದಾ, ಮುಕ್ತಿ ಪಥ ತೋರ್ಪ ನೀತಿಶೀಲ ನಿರ್ಮಲಾ ದಂಪತಿಗಳ ಅಮರ ಪ್ರೇಮ ಯೌವನದಲ್ಲಿ ಪತಿಯ ಸುಖ ಕಾಣದೇ, ಕಂಡ ಕಂಡವರಿಗೆ ದೇಹವನ್ನೇ ಮಾರಿಕೊಳ್ಳಲು ಹಚ್ಚುವ ತಂದೆ ತಾಯಿಗಳ ಮೂರ್ಖತನದಿಂದಾಗುವ ಜಾರಿಣಿಯ ಪ್ರೇಮ, ಎಷ್ಟು ಮಹಾಕವಿಗಳ ವಿಮರ್ಶಿಗಳ ಲೆಕ್ಕಣಿಕೆಯಿಂದ ಹೊರಬಿದ್ದ ಪ್ರೇಮ ಕಥನಾ. ಅದನ್ನು ಓದಿ ಶೂನ್ಯಮತಿ ಯಾಗುವ ತರುಣ ತರುಣಿಯರ ಮನಾ.

**ಪದ**— ರಾಗ: ಬೆಂಗಾಲಿ ಭೈರವಿ ತಾಳ: ಕವಾಲಿ

ಕುಲವತಿ ಶೀಲವ ನಾ ಕಾಣದೆ । ದುಡುಕಿದೆನಾ ಅವಿಚಾರದೆ ॥ ಪ ॥
ಶೋಭಿಸಿ ವಿದ್ಯಾ ಗುಣಧರ್ಮದಾ । ಶೋಧಿಸದೆ ಸ್ತ್ರೀ ಕುಲಹೀನಳಾದೆ ।
ಬಾಳಲಿ ನಾನೆಂತು ಈ ಜಗದಲೀ ॥ ೧ ॥

(ಪದ ಮುಗಿದ ಮೇಲೆ ನಿರ್ಮಲಾ ನಗುವಳು, ಕುಸುಮಾ ಭಯದಿ ಗಾಭರಿಯಿಂದ ನೋಡುವಳು.)

**ನಿರ್ಮಲಾ**— ಬೆದರಿದೆ, ಏನು ಬೆಡಗಿನ ಹೆಣ್ಣೆ !

**ಕುಸುಮ—** ನಿಶೆಯ ನಿಶ್ಶಬ್ದತೆಯ ಒಡೆದು, ಮೂಡೆದ್ದಿರುವ ರುದ್ರ ರೂಪಿಣಿ ನೀನಾರು? ಮಾನವಿಯೋ ದಾನವಿಯೋ ಬಂದಿರುವಿಯೇಕೆ? ಬಂಗಲೆಯಲ್ಲಿ ಭೀಕರ ರೂಪಿಣಿ.

**ನಿರ್ಮಲಾ—** ಸತಿಮಣಿ, ಶೀಲ ಮಾನಗಳ ಬಿಟ್ಟು, ಅನೀತಿ ನಿರ್ಲಜ್ಯಗಳಿಗೆ ಎಡೆ ಗೊಟ್ಟಿರುವ ಹೆಣ್ಣಿನ ಹೇಯ ನಡತೆಯ ಹಿರಿಮೆಯು ಕಾಣಬಂದಿರುವೆನಿಲ್ಲಿ.

**ಕುಸುಮ—** ಆವ ಚಿತ್ರ ಚರಿತ್ರೆಯಲ್ಲಿ?

**ನಿರ್ಮಲಾ—** ವನಿತೆಯ ಮನದಲ್ಲಿ ಒಡಮೂಡಿರುವ ಅವನತಿಯ ಅವಲೋಕನದಲ್ಲಿ.

**ಕುಸುಮ—** ಬಗೆಯೊಳಗೆ ಬಯಸಿ ಬಂದಿರುವಿ, ಆವ ಸಾರ್ಥಕತೆ ಗಾಗಿ?

**ನಿರ್ಮಲಾ—** ಹರಿ, ಹರ, ಬ್ರಹ್ಮ ತಲೆ ಬಾಗಿರುವ ಮಾನವತಿಯ ಪಾವಿತ್ರ್ಯದ ಸ್ತ್ರೀ ಧರ್ಮ ತೋರುವದಕ್ಕಾಗಿ!

**ಕುಸುಮ—** ಅಂದರೆ ನೀನು ನನ್ನ ಕೃತಿಯ ಕಂಡವಳೇ.

**ನಿರ್ಮಲಾ—** ಕಂಡಿರುವೆ ಕಂಡಿರುವೆ, ಓ ನಿರ್ಮಲ ಪತಿವ್ರತೆ, ಕ್ರೂರತೆಗೆ ಮನೆಯಾಗಿರುವ ನಿನ್ನ ಮನದಲ್ಲಿ ಸ್ತ್ರೀಶೀಲಸುಳಿದಾಟವಿಲ್ಲಾ ಹೆಣ್ಣಿನ ಮೇಲ್ಮೆಯ ನೈರ್ಮಲ್ಯವಿಲ್ಲ ಸಾಧ್ವಿಯ ಸತ್ವವಿಲ್ಲ.

**ಕುಸುಮ—** ಚ್ಯುತಳಾಗಿರುವೆನೆ ಆ ಧರ್ಮದಿಂದ ನಾನು, ಇಲ್ಲ ಕುಸುಮದ ಕೋಮಲತೆಯ ಮೀರಿದ ಮಾನವಿಯ ಮನವೆನ್ನದು.

**ನಿರ್ಮಲಾ—** ದಾನವಿಯು ನಾಚಿದಳು, ಈ ಮಾನವಿಯ ಅಕೃತ್ಯ ಛಲನೆಗೆ, ಸ್ತ್ರೀ ಪಾವಿತ್ರ್ಯತೆಗೆ ಅಪವಿತ್ರತೆ ಆವರಿಸಿದೆ ನಿನ್ನ ನಡತೆಯಿಂದ, ಶೀಲತೇಜದಿಂದ ಅಮರತೆಯ ಪಡೆದಿರುವ ಪಂಚಕನ್ಯೆಯರು ವಿಷಕನ್ಯೆಯ ರಾದರು ಈ ಪಾಪಿಣಿಯ ಎದೆಯುಸಿರು ತಾಕಿ.

**ಕುಸುಮ—** ನಡಗುತಿದೆ ಮನವು, ನಿನ್ನ ಒಂದೊಂದು ಶಬ್ದಧ್ವನಿಗೆ ಕರ್ಕಶವಾಗಿ ಕೇಳುತ್ತಿದೆ ಕಿವಿಗೆ, ಹೊರಡು ಪಿಶಾಚಿ.

**ನಿರ್ಮಲಾ**— ಹೆಣ್ಣಿನ ಗೌರವಕೆ ತಲೆಬಾಗಿ ಮಾಂಗಲ್ಯದಿಂದ ಮಾನವತಿಯಾಗಿ ಮೆರೆಯುವ ಮೊದಲು ನರೇಂದ್ರನೊಡನೆ ಸರಸವಾಡಿ ಶ್ರೀಕಾಂತನನ್ನು ವಂಚಿಸಿ ಕರಪಿಡಿದು, ಅವನ ಸರ್ವಸ್ವವನ್ನು ನಾಶಮಾಡಲು ನಿಂತಿರುವ ನೀನು ಸೋಗಿನ ಮಹಾಗರತಿ.

**ಕುಸುಮ**— ಎಲೆ ಶಟವಿ.

**ನಿರ್ಮಲಾ**— ನಿನ್ನ ರತಿಸುಖಕ್ಕೆ, ನಿನ್ನ ಮನದ ಬಯಕೆಗೆ, ಈ ಮನೆಗೆ ಅರ್ಧಪಾಲುಗಾರನಾಗಿರುವ ಅಶೋಕ ಶ್ರೀಕಾಂತರಲ್ಲಿ, ಆ ತಂದೆ ಮಕ್ಕಳಲ್ಲಿ ಭೇದಹುಟ್ಟಿಸಲು ಅಶೋಕನಲ್ಲಿ ದೋಷಾರೋಪಣೆ ಹೊರಿಸಿದ ನೀನು ಶಟವಿ, ಜಾರ ಕರ್ಮಿಣಿ.

**ಕುಸುಮ**— ಕಂಡಿರುವಳಾವ ಬಗೆಯಿಂದ ಇವಳೆನ್ನ ಚಾರಿತ್ರ್ಯವಾ. ( ಗಾಬರಿಯಿಂದ )

**ನಿರ್ಮಲಾ**— ಮೂಕಿಯಾದಿಯಾ ಮುಖಹೀನೆಯಾದುದೇಕೆ ?

**ಕುಸುಮ**— ಕೇಳಲಾರೆ ನಿನ್ನ ನುಡಿಯ ನಡೆಯಿಲ್ಲಿಂದ.

**ನಿರ್ಮಲಾ**— ಪಾಪಿಣಿಗೆ ಪುಣ್ಯಶ್ರವಣ ಸಲ್ಲಲಾರದು.

**ಕುಸುಮ**— ನೀನು ನುಡಿಸಿದ ಶಬ್ದ ಕಿಡಿಗಳು ನನ್ನ ದೇಹವನ್ನು ಸುಡಿತ್ತಿವೆ ನಡೆ ಅತ್ತ.

**ನಿರ್ಮಲಾ**— ಓ ಗರತಿ, ನರಕಸಾದ್ರಶ್ಯವಾದ ನಿನ್ನ ಬಂಗಲೆಯಲ್ಲಿ ನಿಲ್ಲಲಾರೆ ನಾನಿನ್ನು ಬಳಿಸಾರುತಿದೆ ನಿನ್ನ ಬಯಕೆ ಪೂರ್ಣವಾಗುವ ಕಾಲ. ಹಿಡಿದಿದೆ ಭೈರವಿಯ ರುದ್ರರಾಗತಾಂಡವಕೆತಾಲ, ಈ ದೃಶ್ಯ ಆದರ್ಶವೇ ಸ್ತ್ರೀಕುಲ ಜಾಗ್ರತಿಗೆ ಮೂಲ ( ಹೋಗುವವಳು ನಗುತ್ತ ಕುಸುಮ ಕಣ್ಮುಚ್ಚಿ ನಿಲ್ಲುವಳು ಭಯದಿಂದ. ನರೇಂದ್ರ ಬರುವನು )

**ನರೇಂದ್ರ**— ಕುಸುಮಾ, ಕುಸುಮಾ

**ಕುಸುಮ**— ಬಳಿಸಾರದಿರು, ಬಳಿಸಾರದಿರು ಓ ರುದ್ರರೂಪಿಣಿ.

**ನರೇಂದ್ರ**— ಕುಸುಮಾ ಭ್ರಮೆಯೇ, ಕನಸಿನಲಿರುವಿಯಾ.

**ಕುಸುಮ**— ಕನಸಿನ ಕನವರಿಕೆಯಲ್ಲ ಮೌನದ ಮುಸುಕಿನೊಳಲ್ಲ ಜಾಗ್ರತೆಯೊಳಿರುವೆ ಭಯವಾಗುತಿದೆ ಹತ್ತಿರ ಸಾರದಿರು.

ನರೇಂದ್ರ— ಕುಸುಮಾ ನಿನಗೇಕೆ ಈ ಭೀತಿ ನಾನಿರಲು.

ಕುಸುಮ— ಆರು ನರೇಂದ್ರಾ.

ನರೇಂದ್ರ— ಏನು ಕಂಡೆ ಈ ಕನವರಿಕೆ ಏಕೆ ?

ಕುಸುಮ— ನನಗೆ ಭಯವಾಗುತ್ತಿದೆ.

ನರೇಂದ್ರ— ಆರಿಂದ ?

ಕುಸುಮ— ನನ್ನ ಬಳಿ ಸಾರಿದ ಘೋರರೂಪಿ, ನುಡಿಸಿದ ಅವಳ ಸಿಡಿಲ ಶಬ್ದಕ್ಕೆ ಧಡಧಡನೆ ಹಾರುತ್ತಿದೆ ನನ್ನೆದೆ.

ನರೇಂದ್ರ— ಹುಚ್ಚಿ ಕಲ್ಪನೆಗೆಡೆಗೊಟ್ಟರೆ ಭೀತಿ ಮನವನಾವರಿಸಿ ಮಾನವನ ಮತಿಕುಂಠಿತವಾಗುವದು.

ಕುಸಮ— ನೀನೆನ್ನ ಬಿಟ್ಟು ಹೋಗದಿರು.

ನರೇಂದ್ರ— ನಿರಂತರ ನಾನು ನಿನ್ನ ಬಳಿಯಲ್ಲಿರಲು ಅದಕ್ಕೊಂದು ಆತಂಕವಿದೆ.

ಕುಸುಮ— ಯಾರಿಂದ. (ನಿರ್ಮಲಾ ಶ್ರೀಕಾಂತನಿಗೆ ತೊರಿಸುವಳು)

ನರೇಂದ್ರ— ನಿನ್ನ ಪತಿಯಿಂದ.

ಕುಸುಮ— ಅದರ ನಿವಾರಣೆ ಎಂತು.

ನರೇಂದ್ರ— ಅವನ ಕೊಲೆಯಿಂದ ನಮ್ಮೀರ್ವರ ಬಾಳು ನಿರ್ವಿಘ್ನ.

ಕುಸುಮ— ಸತಿಯಿಂದ ಪತಿಯ ಕೊಲೆ !

ನರೇಂದ್ರ— ಅಹುದಹುದು ನಿನ್ನಿಂದಲೇ ಶ್ರೀಕಾಂತನ ಕೊಲೆಯಾಗಬೇಕು.

ಕುಸುಮ— ಪತಿಯ ಕೊಲೆಗೈವ ಪಾಪಿಣಿಗೆ ರವರವ ನರಕ ಪ್ರಾಪ್ತಿ.

ನರೇಂದ್ರ— ಸ್ವರ್ಗ ನರಕಗಳು ಕಲ್ಪನೆಯ ಕವನ ಸಾರಗಳು, ಧರ್ಮ ವೇದಾಂತ ತತ್ವ ಬೋಧಗಳು ಧನಪ್ರಾಪ್ತಿ ಗೈವ ಸಾಧನಗಳು, ಪಾಪ ಪುಣ್ಯಗಳು ಮಾನವನಿಗೆ ಭೀತಿಯನ್ನು ತೋರ್ಪ ಭಯ ಭೂತಗಳು, ಈ ಯುಗದೊಳಗೆ ಇವುಗಳಿಗೆ ಇಂಬಿಲ್ಲಾ. ಸ್ವರ್ಗ, ನರಕ, ಧರ್ಮ, ವೇದಾಂತ, ಪಾಪ, ಪುಣ್ಯಗಳ ಅರುವು ಮರುವಾಗಿದೆ ಮಾನವ ಜೀವಿಗಳಿಗೆ ! ಅಂತೆಯೇ ಬಳಕೆಯಲಿ ಬೆಳಗುತಿದೆ ಧರ್ಮ ಸ್ವಾರ್ಥ ರೂಪದಲಿ.

ಕುಸುಮ— ನಿರ್ಮಲಾ ಮನೋಭಾವನೆಗೆ ನೆಲೆ ಇಲ್ಲಾ.

**ನರೇಂದ್ರ**— ಎಳ್ಳಷ್ಟೂ ಭಾರತದ ಭಾಗ್ಯದಾತ ನೇಗಿಲ ಯೋಗಿಯ ಹೊಲಮನೆಗಳನ್ನು ಸಾಲಕ್ಕೆ ಅಡವಿರಿಸಿಕೊಂಡು, ಬಡ್ಡಿಯ ಭಾರದಿಂದ ಬಸವಳಿದ ಆವನ ದೇಹವನ್ನೇ ತುಳಿದು ಆವನ ಅಸ್ಥಿ ಪಂಜರದ ಮೇಲೆ ಸ್ಥಿರಾಸ್ತಿಯ ಬಂಗಲೆಯ ನಿಲ್ಲಿಸಿ, ಬಗೆಬಗೆಯ ಸೊಗ ವಿಲಾಸಗಳಲ್ಲಿ ಲೋಲಾಡುವ ನರರಾಕ್ಷಸ ಸ್ವಾರ್ಥಿ ಸಿರಿವಂತರೆದೆಯೊಳಗೆ ಟಾರ್ಚ ಹಾಕಿ ನೋಡಿದರೆ ಸಿಗಬಲ್ಲದೇ ದಯದ ಕಣ.

**ಕುಸುಮ**— ನರೇಂದ್ರಾ! (ಗಾಬರಿಯಿಂದ)

**ನರೇಂದ್ರ**— ಮನೆ ಬಾಗಿಲಿಗೆ ಬಂದ ಭಿಕ್ಷುಕರಿಗೆ ಕೈಯೆತ್ತಿ ನೀಡದ ಲಕ್ಷಾಧೀಶರು, ಅಧರ್ಮ ಕೃತಿಯಿಂದ ಮನೆ ಮಠಗಳನ್ನು ನೆಲಸಮ ಮಾಡಿದ ರೊಕ್ಕದಿಂದಲೇ ಬಿತ್ತಿ ಬೆಳೆ ಮಾಡುವರು. ತಮ್ಮ ಹೆಸರನ್ನು ಬಗೆಬಗೆಯ ರೂಪದಲ್ಲಿ ಜಗಕಾದರ್ಶತೆಯಲಿ! ಮತ್ತೆ ಕಲ್ಲು ದೇವರಿಗೆ ದಕ್ಷಿಣೆಯ ರೂಪ ದಲ್ಲಿ ಲಂಚವನ್ನು ಕೊಟ್ಟು, ಕಟ್ಟುವರು ಧರ್ಮಶಾಲೆ ಮಠಗಳ ಧರ್ಮ ಪ್ರವರ್ತಕರೆಂಬ ನಾಮದಲ್ಲಿ.

**ಕುಸುಮ**— ಮೂಢಳಾದೆ ನಿನ್ನ ಶಬ್ದಗಳಿಗೆ, ಆದರೆ ಹೆಣ್ಣಾದ ನನಗೆ ಕೊಲೆಗೈವದು ಸಾಧ್ಯವೇ?

**ನರೇಂದ್ರ**— ಕೋಮಲತೆಗೆ ಸ್ಥಳವಿಲ್ಲದ ನಿರ್ಮಲತೆಗೆ ನೆಲೆಯಿಲ್ಲದ, ಶೀಲದ ಮೂಲವನ್ನೇ ತಿಳಿಯದ ಈ ನಿನ್ನ ನಡತೆಯೇ ಸಾರಿ ಹೇಳುತ್ತಿದೆ, ನೀನು ಜಾರಿಣಿಯೆಂದು.

**ಕುಸುಮ**— ನಿನಗಾಗಿ ನಾನು ಈ ಕರ್ಮಕ್ಕೆ ಕೈ ನೀಡಿದೆ!

**ನರೇಂದ್ರ**— ನನಗಾಗಿ ಅಲ್ಲ ಬಾಯಿಸಾಹೇಬ, ಕಾಮನಾಟದ ಸರಸ ಸಲ್ಲಾಪಕ್ಕಾಗಿ ನಿನ್ನ ಮೋಹದ ಮನ ತೃಪ್ತಿಗಾಗಿ.

**ಕುಸುಮ**— ಕಪಟ, ನಿನ್ನ ಸುಖಕ್ಕಾಗಿ ನಾನು ಶ್ರೀಕಾಂತನ ಕರ ಹಿಡಿದೆ, ನಿನ್ನ ಹಿತಕ್ಕಾಗಿ ನಿರ್ದೋಷಿ ಅಶೋಕನಲ್ಲಿ ದೋಷ ಹೊರಿಸಿ ಮನೆ ಬಿಡಿಸಿದೆ, ಈ ಮೊದಲು ಈ ವಿಷಭಾವ ನಿನ್ನಲ್ಲಿ ಬೇರೂರಿರುವದನ್ನು ಕಂಡಿದ್ದರೆ!

**ನರೇಂದ್ರ**— ಮಹಾ ಪತಿವ್ರತೆಯಾಗಿ ಉಳಿಯುತ್ತಿದ್ದೆಯಲ್ಲವೇ? ಕುಸುಮ ಅವಿವಾಹಿತಳಾಗಿರುವಾಗ ಈ ಸುವಾಸಿನಿಯ ಕುಸುಮದ ಮಧು ವನ್ನು ಎಷ್ಟು ಭೃಂಗಗಳು ಹೀರಿ ಹೋಗಿರುವವೋ ಎಂಬುದು ಮನದಲ್ಲಿ ಸುಳಿಸುಳಿದು ಮಿಂಚಿ ಹೋಗಿದೆ.

**ಕುಸುಮ**— (ಸಿಟ್ಟಿನಿಂದ) ನರೇಂದ್ರಾ!

**ನರೇಂದ್ರ**— ಕುಸುಮಾ, ನನ್ನ ನಿನ್ನ ಅಂತರಂಗದ ನಿಜತ್ವವನ್ನು ಇಂದು ತಿಳುಹಿಸದೆ, ಏತಕ್ಕೆ ಅರಿತೆಯಾ? ಇಂದೇ ನನ್ನ ನಿನ್ನ ಜೀವನದ ಕೊನೆಯ ದಿನ! ಇನ್ನು ನನ್ನ ನಿನ್ನ ಪ್ರವೇಶವಿಲ್ಲ ಈ ನಾಟಕದಿ ತೆರೆಯ ಮರೆ ಯಿಂದ ಹೊರಬರಲು! ಕುಸುಮಾ, ನೀನು ನಿನ್ನ ಪತಿಯ ಕೊಲೆಗೈಯದಿದ್ದರೆ, ಮೊದಲು ನೀನು ಬಲಿ ಬೀಳಬೇಕಾಗುವದು. (ಪಿಸ್ತೂಲ ತೋರಿಸುವನು ಶ್ರೀಕಾಂತ ಬರುವನು)

**ಶ್ರೀಕಾಂತ**— ಜೋಕೆ?

**ನರೇಂದ್ರ**— ಯಾರು ಶ್ರೀಕಾಂತಾ!

**ಶ್ರೀಕಾಂತ**— ಹಾ ಶ್ರೀಕಾಂತಾ, ಇದುವರೆಗೂ ನಡೆದ ಜಾರಜಾರಿ ಣಿಯರ ಕಥನವನ್ನು ಕೇಳಿದ ಶ್ರೀಕಾಂತಾ! ಓ ಡಾಂಭಿಕ ದೇಶಭಕ್ತಾ, ಇಂಬುಗೊಟ್ಟೆ ನಿನ್ನ ನಟಳಿಗೆ ನಂಬಿ ಶಾಂತಿ ಸತ್ಯ ಧರ್ಮಮೂರ್ತಿ ನೀನೆಂದು ಮನದಲ್ಲಿ ಬೇರಾವ ಭೇದವನ್ನು ತಾರದೆ ನಿನ್ನ ನುಡಿಗಳೇ ನನಗೆ ಹಿತವಚನ ಗಳೆಂದು ತಲೆ ದೂಗಿದೆ, ನಿನ್ನ ವಿಷಹೃದಯ ತಿಳಿಯದಾದೆ ನೀನು ಧರಿಸಿದ ಶುಭ್ರವೇಷಭೂಷಣಕೆ ಬೆರಗಾಗಿ!

**ನರೇಂದ್ರ**— ಬಾಯಿ ಮುಚ್ಚು ಜಠರಾ.

**ಶ್ರೀಕಾಂತ**— ಕಪಟಿ, ಸತ್ಯದ ನಿಜತ್ವವನ್ನು ತಿಳಿಯದ ಸ್ವಕಾರ್ಯ ಸಾಧನೆಯಲ್ಲಿ ಸ್ವದೇಶದ ಹಿತವ ಬಯಸುವ ನಿಸ್ವಾರ್ಥದ ಬೆಳವಣಿಗೆಯಲ್ಲಿ ಜನದ ಏಳಿಗೆಯ ಮಾರ್ಗ ತೋರುವ ನಿಮ್ಮಂಥ ಕುಟಿಲ ಕಾರಸ್ಥಾನಿಗಳೇ ನಿಜವಾದ ದೇಶದ್ರೋಹಿಗಳು.

**ಕುಸುಮ**— ಕ್ಷಮಿಸೆನ್ನಪರಾಧವನು (ಕಾಲಿಗೆ ಬೀಳುವಳು)

**ಶ್ರೀಕಾಂತ**— ಮುಟ್ಟದಿರೆನ್ನ ಮಹಾಗರತಿ! ಎಲೆ ಹೆಣ್ಣೆ, ನಿನ್ನದಾವ ತಪ್ಪಿಲ್ಲ, ತಪ್ಪಿರುವದದು ನನ್ನಲ್ಲಿ. ಧನದ ಮದದಲ್ಲಿ ಮುದಿತನದ ಮಬ್ಬಿನಲ್ಲಿ

ಹೆಣ್ಣಿನಾಳಲಾರದ ಶಕ್ತಿಹೀನತೆಯಲ್ಲಿ ಮಗ್ಗಲಲ್ಲಿನಿಂತರೆ ಮಗಳಂತೆ ತೋರುವ ಕುಮಾರಿಗೆ ಮಾಂಗಲ್ಯಕಟ್ಟಿ, ಮಡದಿ ಎಂದು ಮನೆಯೊಳಿರಿಸಿಕೊಳ್ಳುವ ಈ ಮುದುಕರಿಗೆ ಎಂದಿನವರೆಗೆ ಜಾಗ್ರತಿಯಾಗುವದಿಲ್ಲವೋ ಅಂದಿನವರೆಗೆ ಸ್ತ್ರೀ ಸ್ವೈಚ್ಛಾಚಾರದ ಹಾದರದಕೊಳಚಿ ತೊಳೆದು ಹೋಗಲಾರದು ಭಾರತದಿ !

**ನರೇಂದ್ರ**— ಶ್ರೀಕಾಂತಾ, ಬಂದಿರುವೆ ನಿನ್ನ ಭಾಗ್ಯಶ್ರೀಗೆ ನಿನ್ನ ಬಲಿ ಇಡುವದಕ್ಕಾಗಿ

**ಶ್ರೀಕಾಂತ**— ದೇಶಭಕ್ತ, ದೇಶಭಕ್ತನ ಸೋಗಿನಲ್ಲಿ ಕೊಲೆಸುಲಿಗೆ ಯನ್ನು ನಡೆಸಿದೆ, ಕಳ್ಳಪೇಟಿಯ ವ್ಯವಹಾರವನ್ನು ಮಾಡಿದೆ, ನಿನ್ನವಳಾದ ಇವಳನ್ನು ನನ್ನ ಮನೆಯವಳನ್ನಾಗಿ ಮಾಡಿಡೆ ಕೊನೆಗೆ ನನ್ನ ಮರಣಕ್ಕೆ ಸಿದ್ಧ ನಾದೆ. ಅಬ್ಬಾ ! ಎನಿತು ಗಾರುಡಿತನ ತುಂಬಿಕೊಂಡಿಡೆ ಈ ಉರುಟು ಬಟ್ಟೆಯ ಮನೆಮುರುಕರಲ್ಲಿ !

**ನರೇಂದ್ರ**— ಶ್ರೀಕಾಂತಾ,

**ಶ್ರೀಕಾಂತ**— ನನ್ನ ಹಿತಕ್ಕಾಗಿ ಉಪದೇಶಿಸಲು ಬಂದ, ಅಶೋಕ ನನ್ನು ನಿಂದಿಸಿದೆ. ನಿಮ್ಮಿಬ್ಬರ ಮಾತಿಗೆ ಮನಸೋತು, ಮನೆಬಿಟ್ಟು ಹೊರಗೆ ಹಾಕಿದೆ. ಈ ದುಷ್ಕೃತ್ಯಗಳಿಗೆ ನಾನೇ ಕಾರಣನಾಗಿರುವದರಿಂದ ಗುಂಡಿಕ್ಕು ಈ ದೇಹ ಇಬ್ಭಾಗವಾಗುವಂತೆ !

**ಕುಸುಮ**— ಇಲ್ಲ, ನಾನೇ ನಿಮ್ಮ ಸರ್ವನಾಶಕ್ಕೆ ಮೂಲ. ಬಲೆ ಬೀಳಲಿ ನನ್ನ ದೇಹ, ನಿಮ್ಮ ತೃಪ್ತಿಗಾಗಿ !

**ಶ್ರೀಕಾಂತ**— ಓ ಚೆಲುವೆ, ಅಳಬೇಡ ನಗು ! ನಾನು ಕಣ್ಣು ಮುಚ್ಚಿದರೆ, ಈ ಬಂಗಲೆಯ ಭಾಗ್ಯ ನಿನ್ನದು ! ಈ ಜಾರನೊಡನೆ ರತಿಸುಖದಿ ಲೋಲಾಡಲು ನಿನಗಾರ ಆತಂಕವಿಲ್ಲ ! ಎಲೆ, ಮಲಿನ ಮನದ ನಾರಿ, ನಿನ್ನಂತೆ ಗೌರವದ ಗರತಿಯ ಸೋಗಿನಲ್ಲಿ ಬೆಳೆಬೆಳೆದು, ನೀತಿ-ಶೀಲಗಳನ್ನೇ ಅಳಿದು ಕಳೆದುಕೊಂಡಿಹರು ಸತ್‌ಪುತ್ರಪ್ರಾಪ್ತಿಯ ತಾಯ್ತನವ !

**ನರೇಂದ್ರ**—ನೀನುಳಿದರೆ, ನನಗೆ ಜೀವಿಸಲು ಮಾರ್ಗವಿಲ್ಲ ! ಮುಗಿ ಯಿತಿಂದಿಗೆ ನಿನ್ನ ಜೀವನ ಯಾತ್ರೆ !

**ಕುಸುಮ**— ನರೇಂದ್ರಾ, ( ನರೇಂದ್ರ ಗುಂಡು ಹಾರಿಸುವನು. ಕುಸುಮ ಶ್ರೀಕಾಂತನ ಮುಂದೆ ಬರುವಳು. ಕುಸುಮಳಿಗೆ ಗುಂಡು ತಾಕು ವದು. ನಿರ್ಮಲಾ ನೋಡಿ ಗಾಬರಿಯಿಂದ ಮರೆಯಾಗುವಳು.)

**ಅಶೋಕ**— (ಒಳಗಿನಿಂದ) ಚಿಕ್ಕಪ್ಪಾ, ಚಿಕ್ಕಪ್ಪಾ.... ( ನರೇಂದ್ರ ಪಿಸ್ತೂಲು ಒಗೆದು ಮರೆಯಾಗುವನು. ಶ್ರೀಕಾಂತನು ಕುಸುಮಳ ತಲೆ ಯನ್ನು ತೊಡೆಯಮೇಲಿಟ್ಟುಕೊಂಡು ಕುಳಿತಿರುವನು. ಅಶೋಕ ಬರುವನು)

**ಅಶೋಕ**— ಚಿಕ್ಕಪ್ಪಾ, ಚಿಕ್ಕಪ್ಪಾ (ನೋಡಿ ಗಾಬರಿಯಾಗುವನು)

**ಶ್ರೀಕಾಂತ**—ಬಂದೆಯೇಕೆ ಧರ್ಮಮೂರ್ತಿ ! ಈ ಅಧರ್ಮ ಕೊಲೆ

**ಅಶೋಕ**— ಏನು, ಕುಸುಮಾ ತಾಯಿಯ ಕೊಲೆ! (ಪಿಸ್ತೂಲು ಕೈಯಲ್ಲಿ ತಕ್ಕೊಂಡು) ಕಕ್ಕಾ, ಗೈದವರಾರು ?

**ನರೇಂದ್ರ**— ನೀನು ! ಸದ್ಭಕ್ತ ದೇಶಭಕ್ತನೆ, ಕಂಡಿರುವೆ ನೀನು ಗುಂಡಿಕ್ಕಿದ್ದನ್ನು! ರಾವಸಾಹೇಬ, ನಿಮ್ಮ ಕಣ್ಣು ತಪ್ಪಿಸಿ ಕಾಣೆಯಾಗಿದ್ದ ಇದೇ ವ್ಯಕ್ತಿ !

**ಅಮರಕಾಂತ**— (ನೋಡಿ) ಗುರೂಜಿ.... ನಿಮ್ಮಿಂದ....

**ಅಶೋಕ**— ಅಲ್ಲ ವಿಧಿಯಿಂದ ಬಂದೊದಗಿದೆ, ಮಾನವನ ಕುತಂತ್ರ ಆರೋಪದಂದ (ಕೈ ಮುಂದೆ ಮಾಡುವನು. ಪೋಲೀಸ ಬೇಡಿ ಹಾಕುವನು ಅಮರ ಅಳುತ್ತ ಕೆಳ ಮುಖ ಮಾಡಿ ಹೋಗುವನು. ಶ್ರೀಕಾಂತ ಗಾಬರಿ ಯಾಗಿ ನೋಡುವನು. ನರೇಂದ್ರ ನಗುವನು ತೆರೆ ಬೀಳುವದು)

## ಪ್ರವೇಶ ೨೪. ರಸ್ತಾ



(ಕನಕಿ ಚಿಂತಾಮಣಿ ಫ್ಯಾನ್ಸಿ ಡ್ರೆಸ್ಸಿನ ಮೇಲೆ ಬರುವರು. ಚಿಂತಾ ಮಣಿ ಶೂಟು ಕೋಟು ಹ್ಯಾಟಿನಿಂದಲೂ ಕನಕಿ ಬ್ಲೋಜು ಸಿಲ್ಕು ಸೀರೆ ಗಳಿಂದ ಶ್ರಿಂಗಾರವಾಗಿ ಬರುವರು.)

**ಚಿಂತಾಮಣಿ**— ಕಮಾನ್ ಮೈ ಡೀಯರ್ ಕನಕಿ.

**ಕನಕಿ—** ಅಯ್ಯಯ್ಯ ಏಟು ಒತ್ತ್ತಾವಿವು ಬೂಟು ಒಲ್ಲೀ ಮಾರಾಯಾ, ಕೈಯಾಗ ಹಿಡ್ಕಂತೀನಿ. ( ಬೂಟು ಕೈಯಲ್ಲಿ ಹಿಡಿದು ಕೊಳ್ಳುವಳು )

**ಚಿಂತಾಮಣಿ—** ವಾಹ್, ಹೀಗೆ ಹಿಡಿದುಕೊಂಡು ನಿಲ್ಲುವದು ಇದು ಒಂದು ಫಾಶನ್. ಈಗ ನಿನ್ನನ್ನು ಕನಕಿಯಂದು ಯಾರು ಗುರ್ತಿ ಸುವರು ಪ್ಯೂಅರ್ ಲೇಡಿಸ್.

**ಕನಕಿ—** ಹ್ಯಾಟ ಕೋಟಾವ ಹಾಕ್ಕೊಂಡು ನೀನು ಸಾಬರ ಮರಿ ಹೆಂಗ ಕಾಣಸ್ತೀದಿ, ಈಗ ನಿನ್ನ ಕುಣಸಾವಂತಾ ಯಾರು ಗುರ್ತು ಹಿಡಿ ಯಾದಿಲ್ಲಾ.

**ಚಿಂತಾಮಣಿ—** ನೀನು ಮೆಡಮ್ ನಾನು ಜಂಟ್ಲಮೆನ್.

**ಪದ— ಲಾವಣಿ**

ಮೋಹಿಸಿ ಪತ್ತಲ್ । ಝುಂಪರ ಜೋಕಿಗೆ ।
ಕಾಮಿಸಿ ಪೌಡರ್ ವ್ಹಾಶ್ಯಿಸ್ಲನ್ ವಾಸ್ನೆಗೆ ।
ವ್ಹಿಸ್ಕಿ ಸೋಡಾ ಬ್ರ್ಯಾಂಡಿಗೆ ।
ಸೋಡ್ಬಿಟ್ಟೆ ನೀಡಿದೆ ಗಂಡನಿಗೆ ॥ ೧ ॥

( ಕುಣಿಯುತ್ತ ಹೇಳುವನು ) ಇಂಗ್ಲೀಷರು ಇಂಥಾ ಟೊಪ್ಪಿಗಿ ಮುಂದಿಗೆ ಹಾಕಿ ಹಾಕಿ ಕಡೆಗೆ ಕಾಂಗ್ರೆಸ್ಸಿನವರು ಅವರಿಗೆ ಗಾಂಧೀ ಟೊಪ್ಪಿಗೆ ಹಾಕಿ ಕಳಿಸಿದರು ನಡು ರಾತ್ರಿಯಲ್ಲಿ.

**ಕನಕಿ—** ಹೆಂಗ ನೀನೆಲ್ಲಿ ನನ್ನ ಮಲಗಿದಾಗ ಬಿಟ್ಟು ಹೊಕ್ಕೀಯ ಅಂತೀನಿ.

**ಚಿಂತಾಮಣಿ—** ನೊ ನೊ, ಒಂದು ಜೀವ ಹೋಗಿ ಒಂದು ಜೀವ ಉಳಿದರೆ, ಮಿಸ್ಟರ್ ಮಸಿವದನರಾವ್, ಅಂದರೆ ಆ ಯಮರಾಯನು ಹರಣ ಮಾಡಿದ ಜೀವ ರಿಟರ್ನ ಮಾಡುತ್ತಾನೆ. ಯಾಕಂದರೆ ಇಲ್ಲಿ ಹೇಗೆ ಕೂಡಿ ದ್ದೇವೋ ಹಾಗೆ ಯಮರಾಯನಲ್ಲಿ ಮೇಲೆ ಹೋಗಿ ನಿಂತರೇ ಶಿಕ್ಷ ಕೊಡಲಿಕ್ಕೆ ಅವನಿಗೆ ಆನಂದ ವಾಗುತ್ತದೆ.

**ಕನಕಿ—** ನಾವೇನ ಮಾಡೀವಿ ಅಂತಾದು ?

**ಚಿಂತಾಮಣಿ**— ಏನ್ಮಾಡಿವಿ, ಜನರ ಕಿವಿಗೆ ನಮ್ಮ ಚರಿತ್ರೆ ಬಿದ್ದರೆ, ಹೊಡೆಯಲಿಕ್ಕೆ, ಉಗಳಲಿಕ್ಕೆ ಎಷ್ಟು ಬೇಕು ಅಷ್ಟೆಲ್ಲಾ ಮಾಡೀವಿ.

**ಕನಕಿ**— ಇಂತಾವು ಏಟನಡದಾವೇಳು, ನಮ್ದು ನಾವು ದುಡಿದ ತಿನ್ನಾಕ ಯಾರ್ದೇನಂಜಿಕಿ,

**ಚಿಂತಾಮಣಿ**— ನಾವು ದುಡದದ್ದು ನಾವ ತಿಂತೀವಿ, ಮಂದಿಯಾ ರ್‍ಯಾರೂ ತಿನ್ನೊದಿಲ್ಲ.

**ಕನಕಿ**— ಏ ಗಾಡಿಗೆ ಹೊತ್ತಾತಂದೆಲ್ಲಾ ನಡಿಯ ಯಾರರಕಂಡಾರು

**ಚಿಂತಾಮಣಿ**— ನಮ್ಮನ್ನಾರು ಕಂಡ್ಕೊಳ್ಳಬೇಕು ಕಂಡರೆ ಪೋಲೀಸರೆ ಕಂಡುಕೊಳ್ಳಬೇಕು.

(ಕಲ್ಲಪ್ಪ ಗೋಪಾಳಬುಟ್ಟಿ ಹಾಕಿ ಶಂಖು ಹಿಡಿದು ಜಾಗಟಿಗಿ ಬಾರಿ ಸುತ್ತ ಮೂರುನಾಮಾ ಹಚ್ಚಿಕೊಂಡು ಬರುವನು ಶಂಖಾ ಊದುತ್ತ)

**ಕಲ್ಲಪ್ಪ— ಪದ**

ಹಿಂದಿಲ್ಲೊ ಗೋವಿಂದ ಮುಂದಿಲ್ಲೊ ಗೋವಿಂದಾ ಎಂದೆಂದಿಗ ನಿನ್ನ ಪಾದವೆ ಗೋವಿಂದಾ। ಮಾಯದ ಸಂಸಾರ ನಂಬಿದೆ ಗೋವಿಂದಾ। ಮಾಯವಾಯಿತು ನಂದು ಎಲ್ಲವು ಗೋವಿಂದಾ। ನಿನ್ನ ನಾಮವನೆಂದು ಬಿಡಲಾರೆ ಗೋವಿಂದಾ। ಕೈಬಿಡದೆ ಕಾಪಾಡೊ ಬೆಟ್ಟದ ಗೋವಿಂದಾ। ಶ್ರೀಮದ್‌ದ್ರಮಾರಮಣ ಗೋವಿಂದಾ ಗೋವಿಂದ (ಹೋಗುವಾಗ ಚಿಂತಾ ಮಣಿಗೆ ಡಿಕ್ಕಿ ಹೊಡೆಯುವನು)

**ಚಿಂತಾಮಣಿ**— ಸೇವಿಂಗ್ ವಾಟರ್‌ಪ್ರೂಫ್ ವಾಟ್ ಆಡಸಲಾ ಬಡಸಲಾ.

**ಕಲ್ಲಪ್ಪ**— ನೋಡಲಿಲ್ಲ ಗೋವಿಂದಾ, ಇವ ಯಾರಪ್ಪಾ ಜಲ್ಲಿಬುಟ್ಟಿ ಹ್ಯಾಟಿನವಾ, (ನೋಡಿ) ಅಲೇ ಇವ್ನ ಇವ ನಮ್ಮ ಹಿಮ್ಯಾಳದ ಚಿಂತ್ಯಾ.

**ಚಿಂತಾಮಣಿ**— ಎಸ್‌ನ್ಹೊ, ಎಸ್‌ನ್ಹೊ.

**ಕಲ್ಲಪ್ಪ**— ಆಹಾ, ಇಲ್ಲೇತಿ ನೋಡ್ರಿ ಹಕ್ಕಿ.

**ಕಲ್ಲಪ್ಪ— ಪದ** ರಾಗ : ಭೀಮಪಲಾಸ್ ತಾಳ : ಏಕತಾಳ

ಚಿಕ್ಕಿ ಬಣ್ಣದ ಹಕ್ಕಿ ನೀನು ಸೊಕ್ಕಿನ್ಯಾಗ ಮೆರಿಯಬ್ಯಾಡ। ಮಿಕ್ಕಿದ

ಹೆಣ್ಣು ನೀ ಮುಕ್ಕಿಯೇ ಮಣ್ಣು । ಕಕ್ಕುಲತೆ ಇಲ್ಲದ ಪಕ್ಕಾ ಜಾತಿಹೆಣ್ಣು ನೀನು । ಬಿಕ್ಷೆ ಬೇಡತೀಯೆ ಮುಂದೆ । ಲಕ್ಷಕ್ಕಿರಲಿ ನಿನ್ನ ಲಕ್ಷಕ್ಕಿರಲಿ ।

**ಚಿಂತಾಮಣಿ**— ಶೇಷಾಚಲವಾಸ ಗೋವಿಂದಾ ಗೋವಿಂದಾ.

**ಕನಕಿ**—ಏ ಆ ಪರ್ಸವ್ವನ ಮನ್ಯಾಗಿಂದ ಒಂದು ಬಿಲ್ಲಿ ಕೊಡು ಇವಗ

**ಚಿಂತಾಮಣಿ**— ಏ ವ್ಹಿಲೇಜ ಗರ್ಲ ಹಳ್ಳಿ ಪರಸವ್ವನ ಮನಿ ಅಲ್ಲಾ ವನಿಪರ್ಸ ವನಿಪರ್ಸ, ಹೀಂಗ ಉಚ್ಚರ್ಸ, ಲೇವ್ ಸಿಂಗಲ್ ಮ್ಯಾನ್.

**ಕಲ್ಲಪ್ಪ**— ಉಚ್ಚರಸತೀನಿ ತಡಿಲೇ, ನಿನ್ನ ಹ್ಯಾಟು ಗೋಟಿ ಆಗಂಗ ಹೊಡೀತೀನಿ. ನಿಮ್ಮ ಮುಂದೆಲಿ ಮೂಗು ಕೋದು ಊರಾಗ ಮೆರವಣಿಗೆ ಮಾಡತೀನಿ, ಕತ್ತಿಯ ತಗಿಯೋ ಗೋವಿಂದಾ ಮೂಗು ಕೊಯ್ಯೋ ಗೋವಿಂದಾ (ಒಳಗೆ ಓಡುವರು ಹೋಗಿ ಮೂಗು ಕೊಯ್ದು ಹಿಡಿದುಕೊಂಡು ಬರುವನು)

**ಕನಕಿ**— ಅಯ್ಯಯ್ಯ, ಮೂಗು ಕೊಯ್ದಲ್ಲೋ?

**ಕಲ್ಲಪ್ಪ**— ಗಂಡಗ ನೀ ಹೆಂಗ ಮಾಡಿದ್ದೆಲ್ಲೇ!

**ಚಿಂತಾಮಣಿ**— ಭಗ ಭಗ ಅಂತ ಉರೀತೈತೆ ಮೂಗು!

**ಕಲ್ಲಪ್ಪ**— ನೀ ಮಾಡಿದ್ದಕ್ಕ ಧಗ ಧಗ ಅಂತೈತಿ ಹೊಟ್ಯಾಗ ಉರಿ, ಹೊಂಡಲಣ್ಣಾ ಮುಕ್ಕಾ ಮುಕ್ಕಿ ಜೋಡಿ.

**ಕನಕಿ**— ಅಯ್ಯಯ್ಯ ಉರಿತೈತಿ ಮೂಗು.

**ಕಲ್ಲಪ್ಪ**— ಉರಿಲೇ ಗೋವಿಂದಾ! (ಒದೆಯುವನು ಕನಕಿಗೆ)

**ಕನಕಿ**— ಅಯ್ಯಯ್ಯ ಒದಿಬ್ಯಾಡ್ರಿ.

**ಚಿಂತಾಮಣಿ**— ಮೂಗು ಹೋತಲ್ಲೋ ಯಪ್ಪಾ.

**ಕಲ್ಲಪ್ಪ**— ಬೇಶಾತೋ ಯಪ್ಪಾ (ಒದ್ದು ಚಿಂತಾಮಣಿಗೆ)

**ಚಿಂತಾಮಣಿ**— ಅಯ್ಯೋ ಪೋಲೀಸರು ಪೋಲೀಸರು!

**ಕಲ್ಲಪ್ಪ**— ಅಯ್ಯಯಪ್ಪಾ ಪೋಲೀಸರು (ಓಡುವನು)

**ಚಿಂತಾಮಣಿ**— ಬೇಷಾಯಿತು ನಡಿ ಕನಕಿ ಓಡಿ ಹೋಗುವಾ (ಹೋಗುವರು)

## ಪ್ರವೇಶ ೨೫. ಕೋರ್ಟಸೀನ



ಪ್ರಾಸೀಕ್ಯೂಟರ— ದೇವರಾಣೆಯಾಗಿ ಸತ್ಯವನ್ನೇ ನುಡಿಯುವೆನೆಂದು ಆಣೆ ಮಾಡಿ.

**ಅಶೋಕ**— ದೇವರಾಣೆಯಾಗಿ ಸತ್ಯ ಹೇಳುವೆ.

**ಜಜ್ಜ**— ನಿಮ್ಮ ಹೆಸರು?

**ಅಶೋಕ**— ಅಶೋಕ.

**ಜಜ್ಜ**— ತಂದೆಯ ಹೆಸರು?

**ಅಶೋಕ**— ರಘುನಾಥ.

**ಜಜ್ಜ**— ವಯಸ್ಸು?

**ಅಶೋಕ**— ಮುವತ್ತೈದು.

**ಜಜ್ಜ**— ಉದ್ಯೋಗ?

**ಅಶೋಕ**— ಜನತಾ ಸೇವೆ.

**ಜಜ್ಜ**— ನೀವು ನಿಮ್ಮ ಚಿಕ್ಕಪ್ಪನ ಹೆಂಡತಿಯ ಕೊಲೆ ಮಾಡಿರುವಿರಾ?

**ಅಶೋಕ**— ಇಲ್ಲಾ.

**ಜಜ್ಜ**— ಹಾಗಾದರೆ ಕೊಲೆ ಮಾಡಿದವರಾರು?

**ಅಶೋಕ**— ನಾನರಿಯೆ, ನಾನು ನಿರ್ದೋಷಿ!

**ಜಜ್ಜ**— ನೀವು ನಿರ್ದೋಷಿಗಳೆಂಬ ಬಗ್ಗೆ ಆಧಾರಗಳೇನು?

**ಅಶೋಕ**— ನನ್ನ ಚಿಕ್ಕಪ್ಪನೇ ನಿರ್ಮಲ ಆಧಾರದ ಸಾಕ್ಷಿ!

**ಪ್ರಾಸಿಕ್ಯೂಟರ**— ಸತ್ಯವನ್ನೇ ನುಡಿಯುವೆನೆಂದು ಆಣೆ ಮಾಡಿ.

**ನರೇಂದ್ರ**— ಅಸತ್ಯವನ್ನಂತೂ ನಾನು ಜೀವನದಲ್ಲಿಯೇ ನುಡಿದಿಲ್ಲ; ಸತ್ಯವನ್ನೇ ನುಡಿಯುತ್ತೇನೆ.

**ಜಜ್ಜ**— ನಿನ್ನ ಹೆಸರೇನು?

ನರೇಂದ್ರ— ನರೇಂದ್ರಾ.

ಜಜ್— ನಿನ್ನ ತಂದೆಯ ಹೆಸರು ?

ನರೇಂದ್ರ— ರಾಜೇಂದ್ರ.

ಜಜ್— ವಯಸ್ಸು ?

ನರೇಂದ್ರ— ೪೦.

ಜಜ್— ಉದ್ಯೋಗ ?

ನರೇಂದ್ರ— ದೇಶಸೇವೆ.

ಜಜ್— ಶ್ರೀಕಾಂತನ ಸ್ನೇಹಸಂಬಂಧವಿತ್ತೆ ?

ನರೇಂದ್ರ— ಬಹು ದಿನದಿಂದ ಆಪ್ತಮಿತ್ರತ್ವದಲಿ ಬೆಳೆದು ಬಂದಿತ್ತು ನನ್ನ ಅವರ ಸ್ನೇಹ.

ಜಜ್— ಕುಸುಮ-ಶ್ರೀಕಾಂತರ ವಿವಾಹಕ್ಕೆ ನೀವೇ ಕಾರಣರೆ ?

ನರೇಂದ್ರ— ಶ್ರೀಕಾಂತನ ಆಗ್ರಹದಿಂದ, ನಾನವನ ವಿವಾಹಕ್ಕೆ ಪ್ರಯತ್ನಿಸಿದ್ದೆ. ಅದಕ್ಕಾಗಿ ನನ್ನ-ಕುಸುಮಳ ಬಂಧು ಪ್ರೇಮ ನಿರ್ಮಲವಾಗಿತ್ತು.

ಜಜ್— ಅಶೋಕನನ್ನು ನೀವು ಬಲ್ಲಿರಾ ?

ನರೇಂದ್ರ— ಬಲ್ಲೆ.

ಜಜ್— ಶ್ರೀಕಾಂತನು ಅಶೋಕನನ್ನು ಹೊರಗೆ ಹಾಕಿದ್ದೇಕೆ ?

ನರೇಂದ್ರ— ಎರಡನೇ ಲಗ್ನಕ್ಕೆ ವಿಘ್ನಕಾರಿಯಾದ, ಅಶೋಕನ ಮನದ ಇಂಗಿತವನ್ನು ತಿಳಿಯದ ಶ್ರೀಕಾಂತನು, ತನ್ನ ಹೆಂಡತಿಯನ್ನು ಬಲಾತ್ಕರಿಸಿದ್ದನ್ನು ಕಂಡು ಅಶೋಕನನ್ನು ಮನೆಯಿಂದ ಹೊರದೂಡಿದನು.

ಜಜ್—ಕುಸುಮಳ ಕೊಲೆಯನ್ನು ಅಶೋಕನೇ ಮಾಡಿರುವನಲ್ಲವೇ

ನರೇಂದ್ರ— ಕಕ್ಕ ಮಕ್ಕಳ ನಡುವೆ ಬೆಳೆದ ವೈಷಮ್ಯಕ್ಕೆ ಆಹುತಿಯಾದಳು ಅಶೋಕನ ಕರದಿಂದ ಕುಸುಮಾ.

ಜಜ್— ಹಾಗಾದರೆ ನೀವೆ ಕುಸುಮಳ ಕೊಲೆಮಾಡಿರುವಿರೆಂದು ಶ್ರೀಕಾಂತನು ಹೇಳಿಕೆ ಕೊಟ್ಟಿದ್ದೇಕೆ.

ನರೇಂದ್ರ— ಮನಮೆಚ್ಚಿ ಮಾಡಿಕೊಂಡವಳು ಮರಣ ಹೊಂದಿರುವಳೆಂದೂ ಅಶೋಕನನ್ನು ಉಳಿಸಬೇಕೆಂದು ವಂಶಕ್ಕೆ ಆರುದಿಕ್ಕಿಲ್ಲವೆಂದು ಮಗನ ಕಕ್ಕುಲತೆಯಿಂದ ಈ ಕಕ್ಕನು ನುಡಿಸುತ್ತಿರುವನು ಆ ಶಬ್ದಗಳನ್ನು.

ಜಜ್— ಅಶೋಕನು ಕುಸುಮಳ ಕೊಲೆಗೈದದ್ದನ್ನು ನೀವು ಕಂಡಿರುವಿರಾ.

ನರೇಂದ್ರ— ಮರೆಯಲ್ಲಿ ನಿಂತು ನೋಡುತ್ತಿದ್ದೆ ಅಶೋಕನು ಕಕ್ಕನ ಮನೆಯೊಳಗಿಂದಾ ಹಣ ಕದ್ದೊಯ್ಯುವಾಗ ಅಡ್ಡೈಸಿದಳು ಕುಸುಮಾ ಗುಂಡಿಕ್ಕಿದನವಳ ಎದೆಗೆ ಅಶೋಕಾ.

ಜಜ್ ಇದು ನಿಜವೇ.

ಅಶೋಕ— ಸುಳ್ಳು (ಹೋಗುವನು ಶ್ರೀಕಾಂತ ಬಂದು ನಿಲ್ಲುವನು)

ಪ್ರಾಸಿಕ್ಯೂಟರ— ಸತ್ಯವನ್ನೇ ನುಡಿಯುವೆನೆಂದು ಆಣೆಮಾಡಿ.

ಶ್ರೀಕಾಂತ— ದೇವರಾಣೆಯಾಗಿ ಸತ್ಯ ಹೇಳುವೆ.

ಜಜ್— ನಿಮ್ಮ ಹೆಸರೇನು ?

ಶ್ರೀಕಾಂತ— ಶ್ರೀಕಾಂತ.

ಜಜ್— ನಿನ್ನ ತಂದೆಯು ಹೆಸರು ?

ಶ್ರೀಕಾಂತ— ಸೂರ್ಯಕಾಂತ.

ಜಜ್— ವಯಸ್ಸು ?

ಶ್ರೀಕಾಂತ— ೫೫.

ಜಜ್— ಉದ್ಯೋಗ ?

ಶ್ರೀಕಾಂತ— ಬಡ್ಡಿವ್ಯವಹಾರ.

ಜಜ್— ಅಶೋಕನು ನಿಮ್ಮ ಅಣ್ಣನ ಮಗನೇ ?

ಶ್ರೀಕಾಂತ— ಹೌದು ನನ್ನ ಅಣ್ಣನ ಮಗನು.

ಜಜ್— ಇವನಿಗೂ ನಿಮಗೂ ಭಿನ್ನಾಭಿಪ್ರಾಯಗಳಿದ್ದವೆ ?

**ಶ್ರೀಕಾಂತ**— ನನ್ನ ಎರಡನೇ ಲಗ್ನವಾದಂದಿನಿಂದ ಸ್ವಲ್ಪ ವೈಷಮ್ಯತೆ ತಲೆದೋರಿತ್ತು.

**ಜಜ್**— ಇವರನ್ನು ಆಗ್ಗೆ ಮನೆ ಬಿಟ್ಟು ಹೊರದೂಡಿದಿರಾ ?

**ಶ್ರೀಕಾಂತ**— ಹೌದು !

**ಜಜ್**— ಹೊರದೂಡಿದಾಗ ಯಾವಾಗಲಾದರೂ ನಿಮ್ಮ ಹತ್ತಿರ ಬರುತ್ತಿದ್ದನೇ ?

**ಶ್ರೀಕಾಂತ**— ಒಮ್ಮೊಮ್ಮೆ ಕಾಣಲೆಂದು ಬರುತ್ತಿದ್ದ.

**ಜಜ್**— ಇವನಿಂದ ನಿಮ್ಮ ಹೆಂಡತಿಯು ಬಲಾತ್ಕಾರಿಸಲ್ಪಟ್ಟಳೇ ?

**ಶ್ರೀಕಾಂತ**— ಕುಸುಮ ನರೇಂದ್ರರ ಕಪಟ ಜಾಲದಲ್ಲಿ ಸಿಕ್ಕು ಹೊರದೂಡಿದೆ ಅಶೋಕನನ್ನು.

**ಜಜ್**— ನಿಮ್ಮ ನರೇಂದ್ರನ ಸ್ನೇಹ ಸಂಬಂಧವಿತ್ತೇ ?

**ಶ್ರೀಕಾಂತ**— ಮುದಿತನದ ಮಬ್ಬಿನಲ್ಲಿ ಕೈ ಹಿಡಿದವಳ ವ್ಯಾಮೋಹದಲ್ಲಿ ಸ್ನೇಹ ಸಂಬಂಧದಲ್ಲಿ ಮೊದಲು ಕಾಣದಾದೇ ಕುಸುಮ ನರೇಂದ್ರರ ಸರಸವನ್ನು ಈ ಬೇಹುಗಾರನ ದುರ್ಗುಣವನ್ನು.

**ಜಜ್**— ಹಾಗಾದರೆ, ಕುಸುಮಳ ಕೊಲೆಯನ್ನು ಅಶೋಕನೇ ಮಾಡಿರುವನೇ ?

**ಶ್ರೀಕಾಂತ**— ಸುಳ್ಳು ಸುಳ್ಳು ನಿಜವಾಗ್ಗಿ ಇವನೇ ಕೊಲೆಗೈದವನು. ಕಪಟ ಕಾರಸ್ಥಾನಿಯಾದ ಇವನ ಎದೆಯಲ್ಲಿ ಸುಳ್ಳಿನ ಕಂತಿಯೇ ತುಂಬಿದೆ.

**ಜಜ್**— ನರೇಂದ್ರನೇ ಕೊಲೆ ಗೈದನೆಂಬುವದಕ್ಕೆ ಬೇರೆ ಸಾಕ್ಷಿಗಳಿವೆಯೋ ?

**ನಿರ್ಮಲಾ**— ನಾನಿರುವೆ ಇವನ ಪ್ರತಿಯೊಂದು ಕೃತ್ಯಕ್ಕೆ ಸಾಕ್ಷಿ.

**ಜಜ್**— ಅಮ್ಮಾ ನೀನಾರು ?

**ಶ್ರೀಕಾಂತ**— ಇವಳೇ ಕುಸುಮ ನರೇಂದ್ರರ ನಿಜ ಇಂಗಿತವನ್ನು ನನಗೆ ತೋರಿದವಳು. (ಶ್ರೀಕಾಂತ ಇಳಿಯುವನು ಅದೇ ಪಂಜರದಲ್ಲಿ ನಿರ್ಮಲಾ ನಿಂತು)

ಜಜ್— ನಿನ್ನ ಹೆಸರೇನು ?

ನಿರ್ಮಲಾ— ನಿರ್ಮಲಾ.

ನರೇಂದ್ರ— ನಿರ್ಮಲಾ.

ನಿರ್ಮಲಾ— ಅಶೋಕನು ನಿರ್ದೋಷಿ, ಕುಸುಮಳ ಕೊಲೆ ಗೈದವನು ಈ ನರೇಂದ್ರನೇ ?

ಜಜ್— ನೀನು ಪ್ರತ್ಯಕ್ಷವಾಗಿ ಕಂಡಿರುವೆಯಾ ?

ನಿರ್ಮಲಾ— ಶ್ರೀಕಾಂತನನು ವಂಚಿಸಿ ನಡೆಸಿದ್ದ ತಮ್ಮ ಪ್ರೇಮ ಸಂಬಂಧದಿಂದಾ, ಅವನ ಭಾಗ್ಯಕ್ಕೆ ಮನವಿಟ್ಟು ಹೇಳುತ್ತಿದ್ದನು. ಕುಸುಮಳಿಗೆ ಶ್ರೀಕಾಂತನನ್ನು ಕೊಲೆ ಮಾಡೆಂದು ಕರೆ ತಂದು ತೋರಿಸಿದೆ,ಶ್ರೀಕಾಂತನಿಗೆ ಇವರ ಕಪಟ ನಾಟಕವಾ. ಇವರ ನಿಜತ್ವವನ್ನು ತಿಳಿದ ಶ್ರೀಕಾಂತನು ಮನ ಬಂದಂತೆ ನರೇಂದ್ರನನ್ನು ನಿಂದಿಸಲು ತನ್ನ ಕಪಟವು ತಿಳಿಯಿತೆಂದು ನರೇಂದ್ರನು ಶ್ರೀಕಾಂತನಿಗೆ ಗುಂಡಿಕ್ಕಲು ಅಡ್ಡೈಸಿದಳು ಕುಸುಮಾ ! ಬಲಿ ಬಿದ್ದಿತವಳ ದೇಹಾ ನರೇಂದ್ರನ ಗುಂಡಿಗೆ ! ಶಕ್ಕನನು ಕಾಣಲು ಬಂದ ಅಶೋಕಾ ಸಿಲುಕಿ ಬಿದ್ದನು, ಸುಳ್ಳಿನಾರೋಪದ ಶೃಂಖಲೆಯಲ್ಲಿ !

ಜಜ್— ನರೇಂದ್ರನು ಇದುವರೆಗೆ ಅಶೋಕ ಶ್ರೀಕಾಂತರ ಬಗ್ಗೆ ಹೇಳಿದ ಸಾಕ್ಷಿ ಸುಳ್ಳೇ ? ಇವನ ಪರಿಚಯವು ನಿನಗೆ ಸಂಪೂರ್ಣವಿದೆಯೇ ?

ನಿರ್ಮಲಾ— ಹೇಳುವೆನು, ಈ ನಿರ್ಮಲೆಯ ದುರಂತ ಕಥೆಯಾ, ನರೇಂದ್ರನಿಗಾಗಿ ಅಂದೊಮ್ಮೆ ಚಂದಿರನ ಸಾಕ್ಷಿಯಾಗಿ ಮನ ಒಪ್ಪಿಸಿದೆ ! ನಿರ್ಮಲ ಪ್ರೇಮದಲ್ಲಿ ಬೆಳೆದ ನರೇಂದ್ರನ ಸಂಗದಲ್ಲಿ ನಿರ್ಮಲೆಯ ಗರ್ಭದಿಂದ ಉದ್ಭವಿಸಿ ಬೆಳೆದ ನಿಷ್ಪಾಪಪಿಂಡವೇ ಈ ಅಮರಕಾಂತಾ ! ನನ್ನನ್ನು ಮಗುವನ್ನು ತಿರಸ್ಕರಿಸಿದನು ಈ ನರೇಂದ್ರ ! ದಿಕ್ಕುಗಾಣದೆ, ಮಗುವನ್ನು ಕಟ್ಟೆಯ ಮೇಲಿಟ್ಟು ತಿರುಗಿದೆ, ಈ ಪತಿದೇವನ ಕರ್ಮಕ್ಕೆ ಸಾಕ್ಷಿಯಾಗಿ, ಈ ಹರಿಜನಳಾದ ರೇಣುಕಾ ಈ ಅಮರಕಾಂತನ ಪಾಲನತಾಯಿ. ಇವನ ವಿದ್ಯಾಭ್ಯಾಸಕ್ಕಾಗಿ, ಇವನ ಶ್ರೇಯಸ್ಸಿಗಾಗಿ ಶ್ರಮ ಪಟ್ಟವರೇ ಈ ಅಮರಕಾಂತನ ಗುರೂಜೀ ಈ ಅಶೋಕಾ.

ಜಜ್— ರೇಣುಕಾ ಅಮರಕಾಂತನನ್ನು ನೀನು ಪಾಲನ ಮಾಡಿದ್ದು ನಿಜವೇ ?

ರೇಣುಕಾ— ಸರ್ಕಾರ್, ಮನೆ ಬೀಗ ತೆಗೆಯುತ್ತಿರುವಾಗ ಮಗು ಕಟ್ಟೆಯ ಮೇಲೆ ಅಳುತ್ತಿದ್ದ ಈ ಮಗುವನ್ನು ನಾನು ಪಾಲನೆ ಗೈದದ್ದು ನಿಜ.

ಜಜ್— ನರೇಂದ್ರಾ ಇದುವರೆಗೂ ಇವರು ಹೇಳಿದ ಮಾತು ನಿಜವಷ್ಟೇ?

ನರೇಂದ್ರ— ಸರ್ಕಾರ ಇವರೆಲ್ಲರೂ ಹೇಳಿರುವದು ಸತ್ಯಸಂಗತಿ. ನಿರ್ಮಲಾ ನನ್ನ ಹೆಂಡತಿ, ಅಮರಕಾಂತ ನನ್ನ ಮಗ, ಅಶೋಕ ಶ್ರೀಕಾಂತರು ನಿರ್ದೋಷಿಗಳು ಸತ್ಯ ದೇವತೆಯು ನಿರ್ಮಲ ರೂಪದಲ್ಲಿ ಮೂರ್ತಿಮಂತ ಉದ್ಭವಿಸಿ ನ್ಯಾಯಸ್ಥಾನದಲ್ಲಿ ಹೇಳಿದಳು. ಡಾಂಭಿಕ ದೇಶಭಕ್ತನಾಗಿ ಖಲ ನಾಯಕನಾಗಿ ನಟಿಸಿದ ಈ ನರೇಂದ್ರನ ಪಾತ್ರಪರಿಚಯವ.

(ಜಜ್‌ಮೆಂಟ ಬರೆದು ಟಾಕುವತ್ತಿ ಹೋಗುವನು. ಪ್ರಾಸಿಕ್ಯೂಟರ ಓದುರನು)

ಪ್ರಾಸಿಕ್ಯೂಟರ— ಜಂಟ್ಲಮೆನ್ ಆ್ಯಂಡ ಜೂರಿಜ, ಅಶೋಕನ ಮೇಲೆ ನರೇಂದ್ರನು ಕುಸುಮ ತಾಯಿಯ ಕೊಲೆಯ ಆರೋಪ ಹೊರಿಸಿದ್ದು ಸುಳ್ಳೆಂಬುದು ನಿರ್ಮಲಾತಾಯಿಯ ಸಾಕ್ಷಿಯಿಂದ ಹಾಗೂ ನರೇಂದ್ರನು ತಾನೇ ಕೊಲೆಗೈದಿರುವನೆಂಬ ಹೇಳಿಕೆಯ ಮೇರಿಗೆ ಕೋರ್ಟು ಅಶೋಕ ನನ್ನು ನಿರ್ದೋಷಿಯೆಂದು ಬಿಡುಗಡೆ ಮಾಡಿದೆ. ನಂ. ೧ ನಿರ್ಮಲೆಯನ್ನು ವಂಚಿಸಿದ ಅಪರಾಧ. ನಂ. ೨ ಶ್ರೀಕಾಂತನನ್ನು ಮೋಸಗೊಳಿಸಿದ ಅಪ ರಾಧ. ನಂ. ೩ ಜನಸೇವಕನೆಂದು ಜನತೆಗೆ ಅನ್ಯಾಯವನ್ನು ಮಾಡಿದ ಅಪರಾಧ. ನಂ. ೪ ಕುಸುಮಳನ್ನು ಕೊಲೆಗೈದ ಅಪರಾಧ. ಇವೆಲ್ಲ ಪಾಪ ಕರ್ಮಗಳಿಗೆ ಇವರೆಲ್ಲರ ಸಾಕ್ಷಿಗಳ ಮೇಲಿಂದ ಸ್ವಂತ ತನ್ನ ಹೇಳಿಕೆಯಿಂದ ಒಪ್ಪಿರುವದರಿಂದ ಈ ಎಲ್ಲ ಅಪಾರಧಕ್ಕಾಗಿ ಇಂಡಿಯನ್ ಪೆನಲ್ ಕೋಡ ೩೦೨ ನೇ ಕಲಮಿನ ಪ್ರಕಾರ ಕೊರ್ಟು ನರೇಂದ್ರನಿಗೆ ಫಾಸಿ ಸಿಕ್ಷೆ ವಿಧಿಸಿದೆ.

(ವಕೀಲ ಪ್ರಾಸಿಕ್ಯೂಟರ ಎಲ್ಲರೂ ಹೋಗುವರು. ಪೋಲೀಸರು ನರೇಂದ್ರನನ್ನು ಒಯ್ಯುವರು)

ಅಶೋಕ— ಅಮರಕಾಂತಾ, ನಿಜವಾಗಿ ನೀನು ಸತ್ಕುಲಸಂಜಾತಾ

ಅಮರಕಾಂತ— ಅಲ್ಲ ಅನೀತಿ ಅವಿವೇಕಿಗಳ ತನುಜಾತ.

ರೇಣುಕಾ— ನಿನ್ನ ಚಾರಿತ್ರೆಯನ್ನು ಕೇಳಿ ನನಗೆ ಆನಂದವಾಯಿತು ಈ ಸುಮಂಗಲೆಯ ಸುಕುಮಾರನಾದ ನೀನು ಈ ರೇಣುಕೆಯ ಪಾಲನೆ ಯಿಂದ ಸಮಾಜದಲ್ಲಿ ಹರಿಜನನೆಂದದೆನಿಸಿಕೊಂಡಿ.

ನಿರ್ಮಲಾ— ಅಮರಕಾಂತಾ ಮಗೂ ಬಾ, ದಯಬಾರದೆ ನಿನಗೆ ನಿನ್ನ ತಾಯಿಯಲ್ಲಿ.

ಅಮರಕಾಂತ— ಕ್ರೂರ ಮೃಗ-ಪಪಕ್ಷಿಗಳು ತಮ್ಮ ಹೊಟ್ಟೆಯ ಕಂದಮ್ಮಗಳ ನೆನುವಾದೊಡನೆ ಓಡಿಬಂದು, ಅವುಗಳಿಗೆ ಸ್ತನಪಾನ ಮಾಡಿಸಿ. ಸಂತೈಸುತ್ತ ಜೋಕೆ ಮಾಡುತ್ತಿರುವಾಗ, ಮಾನವಿಯಾದ ನಿನ್ನೆದೆಯೊಳಗೆ ಮೂಕ ಪ್ರಾಣಿಗಳಲ್ಲಿ ಕಾಣುವ ಎಳ್ಳಷ್ಟೂ ಮಗುವಿನ ಮಮತೆ ಇಲ್ಲದೆ, ಮಂದಿಯ ಕಟ್ಟೆಯ ಮೇಲೆ ಮಗುವನ್ನು ಚೆಲ್ಲಿಹೋದ ತಾಯ್ತನವಿಲ್ಲದ ನಿನಗೆ, ಈ ಅಮರಕಾಂತನ ಹೃದಯ ನುಡಿಸಲಾರದು ತಾಯಿ ಎಂಬ ಪವಿತ್ರ ಶಬ್ದ........

ಅಶೋಕ— ಶಾಂತಿಯನ್ನು ತಾಳು.

ರೇಣುಕಾ— ಮಗೂ, ಹಡೆದ ತಾಯಿಯಲ್ಲಿ ನಿನಗೇಕೆ ಈ ಹಟ!

ಅಮರಕಾಂತ—ನಿಜ ಚಾರಿತ್ರ್ಯದಿಂದ ಭ್ರಮಣಗೆಡಲಿದೆ ಮಸ್ತಕ! ಕುಲವಂತರಲ್ಲಿ ಕಾಣುತಿದೆ ಹರಿಜನರ ಕೀಳು ನಡತೆಗಳು! ಇಂಥ ತಾಯಿ, ಇಂಥ ಕರ್ಮಚಾಂಡಾಲ ತಂದೆ, ಇಂಥವರ ಮಗನೆನಿಸಿಕೊಳ್ಳುವದಕ್ಕಿಂತಲೂ ಪವಿತ್ರಳಾದ ರೇಣುಕಾ ತಾಯಿಯ ಮಗನೆಂದು, ಹರಿಜನನೆಂದೆನಿಸಿಕೊಳ್ಳುವದೇ ಭೂಷಣವು. (ಹೋಗುವನು.)

## ಪ್ರವೇಶ ೨೬. ಅಮರಕಾಂತನ ಬಂಗ್ಲೆ

(ಮಹಾತ್ಮಾಜಿ ಫೋಟೊ, ಮಧ್ಯದಲ್ಲಿ ಪೂಮಾಲೆ ಹಾಕಿದೆ. (ಅಮರಕಾಂತ ಆಶೋಕ ರೇಣುಕೆಗೆ ನಮಿಸುವನು.)

ಅಶೋಕ— ಮಗೂ, ನಿನ್ನ ತಾಯಿಗೆ ನಮಸ್ಕರಿಸು.

ಅಮರಕಾಂತ— ಈಗ ನಮಸ್ಕರಿಸಿದೆನಲ್ಲಾ.

ಅಶೋಕ—ನಿನ್ನ ಜನ್ಮಕೊಟ್ಟ ಈ ನಿರ್ಮಲಾ ತಾಯಿಗೆ ನಮಸ್ಕರಿಸು

ಅಮರಕಾಂತ— ಗುರೂಜಿ, ಒಪ್ಪಲಾರದ ವಿಷಯಕ್ಕೆ ಒತ್ತಾಯವೇಕೆ ?

ಅಶೋಕ— ಮಗುವನ್ನು ನದಿಯಲ್ಲಿ ತೇಲಿಬಿಟ್ಟಿದ್ದರೂ ನಾನೇ ನಿನ್ನ ಜನ್ಮದಾತೆಯೆಂದು, ಕುಂತಿಯು ಕರ್ಣನಿಗೆ ಹೇಳಿದರೆ, ತೊಟ್ಟಬಾಣ ತೊಡು ವದಿಲ್ಲೆಂದು ಭಾಷೆಕೊಟ್ಟು, ತನ್ನ ಪ್ರಾಣವನ್ನರ್ಪಿಸಿದನು ಜನ್ಮದಾತೆಯ ಋಣಕ್ಕಾಗಿ ಕರ್ಣ ! ತಂದೆಯು ವಚನವನ್ನು ಪಾಲಿಸಲು, ತಾಯಿಯ ಶಿರವ ಹಾರಿಸಿದ ಗಂಡುಗೊಡಲಿಯ ಗಂಡ. ಜನಕನ ಸಂತೃಪ್ತಿಯಲಿ ರೇಣುಕಾ ಮಾತೆಯ ದೇಹವನ್ನು ಪಡೆದು, ಜನ್ಮದಾತೆಯ ಋಣ ತೀರಿಸಿದ ಪರಶು ರಾಮ ! ಅಸುರ ಕಂಸನ ಗುದ್ದಿ, ದಾಸ್ಯಶೃಂಖಲೆಯ ಕತ್ತರಿಸಿ, ತಂದೆತಾಯಿ ಗಳ ಬಂಧವಿಮೋಚನೆಮಾಡಿ, ಮಾತೆಯ ಋಣವನೆ ತೀರಿಸಿದ ಶ್ರೀಕೃಷ್ಣ ! ಅಮರಕಾಂತ, ಜಗದ ಬೆಳಕನ್ನು ಕಂಡಿರುವದು ಈ ತಾಯಿಯಿಂದ ! ಈ ಪದವಿ ದೊರೆತಿರುವದು ಈ ತಾಯಿಯಿಂದ ! ಕೀರ್ತಿಕಾಯನಾಗಿ ತಾಯ್ನಾ ಡಿನ ಸೇವಗೆ ಸಿದ್ಧನಾಗಿರುವದು, ಜನ್ಮಕೊಟ್ಟ ಈ ನಿರ್ಮಲಾ ತಾಯಿಯಿಂದ “ ಮಾತೃದೇವೋ ಭವ ” ಎಂದು ಸಾರುತ್ತಿರುವಾಗ, ತಾಯಿಗೆ ತಾಯಿಯನ್ನ ಲಾರದ ಕುವರನ ಹೃದಯ ಕಟುಕನೆದೆಯನ್ನು ಮೀರಿದ ಕಲ್ಲೆದೆ !

ಅಮರಕಾಂತ— ತಾಯಿ ತಾಯಿ, (ಅಮರಕಾಂತ ನಿರ್ಮಲೆಯ ನ್ನಪ್ಪುವನು)

ಶ್ರೀಕಾಂತ— ಈ ಸುಮಂಗಲ ಸುಪ್ರಭಾತದಲ್ಲಿ ಸುಮಂಗಲೆ ಸುಕು ಮಾರರ ಸಮ್ಮಿಲನ ದೃಶ್ಯವನ್ನು ಕಂಡು ಆನಂದವಾಯಿತು ಮನಕೆ. ನಿರ್ಮಲಾ, ಶೀಲನೈರ್ಮಲ್ಯತೆಯ ಮೇಲ್ಮೆಯಲ್ಲಿ ಅಮರಕಾಂತನಂತಹಾ ಪುತ್ರರತ್ನವನ್ನು ಪಡೆದ ನಿನ್ನ ತಾಯ್ತನಕ್ಕೆ ನಮಿಸುವೆ. ಅಶೋಕಾ ಅರ್ಧ ಸಂಪತ್ತು ನಿನ್ನನು, ಮಕ್ಕಳಿಲ್ಲದ ನನಗೆ ಈ ನಿರ್ಮಲೆಯನ್ನು ಮಗಳೆಂದು ಸ್ವೀಕರಿಸಿ ಉಳಿದ ಅರ್ಧ ಸಂಪದವನ್ನು ಇವಳಿಗರ್ಪಿಸುವೆ. ಈ ಮಂಗಲ ಸಮಯದಲ್ಲಿ ಭಾರತಾಂಬೆಯ ಮಂಗಲ ಪಾಡುವಾ (ಮಂಗಲ ಹಾಡು)

ಸಮಾಪ್ತ